

ಸಂಗವಿಭು

ವಿರಚಿತ

# ಮೂರುಶತಕ

ಸಂಪಾದಕ :

ಶಾಂತರಸ

ಸತ್ಯಸ್ನೇಹ ಪ್ರಕಾಶನ : : ರಾಯಚೂರು



ಸಂಗವಿಭು ವಿರಚಿತ

# ಮೂರು ಶತಕ

ಬಸವಶತಕ
ಭುವನೈಕನಾಯಕೀ ಶತಕ
ಪಂಪಾಶತಕ

ಸಂಪಾದಕ :
**ಶಾಂತರಸ**

ಸತ್ಯಸ್ನೇಹ ಪ್ರಕಾಶನ : ರಾಯಚೂರು

ಸಂಗವಿಭು ವಿರಚಿತ

# ಮೂರು ಶತಕ

ಬಸವಶತಕ
ಭುವನೈಕನಾಯಕೀ ಶತಕ
ಪಂಪಾಶತಕ

○

ಸಂಪಾದಕ :

**ಶಾಂತರಸ**

○

ಸತ್ಯಸ್ನೇಹ ಪ್ರಕಾಶನ :: ರಾಯಚೂರು

*Mooru Sataka : (Written by Sanga Vibhu) Edited by Shantharasa Raichur, Published by Satya Sneha Prakashana Raichur (Karnataka), Printed at the Janata Printery Raichur, 1973*

*Price : Rupees Eight*

ಸತ್ಯಸ್ನೇಹ ಪ್ರಕಾಶನ : ೧೬

ಅಕ್ಟೋಬರ್ ೧೯೭೩

ಹಕ್ಕುಗಳು : ಸಂಪಾದಕ

ಮುಖ ಪುಟ : ಚಂದ್ರಕಾಂತ ಕುಸುನೂರು

ಬೆಲೆ : ಎಂಟು ರೂಪಾಯಿ

ಮುದ್ರಣ: ಪಿ. ಬಸಣ್ಣ

ಜನತಾ ಪ್ರಿಂಟರಿ ಅರಬ್ ಮೋಹಲ್ಲಾ, ರಾಯಚೂರು

ನನ್ನ ಬಾಳಿಗೆ ಬೆಳಕಿನ ತಿರುವನ್ನಿತ್ತ

ಗೆಳೆಯರು :

ಶ್ರೀ ಚೆನ್ನಬಸವಪ್ಪ ವಕೀಲ ಬೆಟ್ಟದೂರು
ಶ್ರೀ ಬಸವನಗೌಡ ಕರಡಿಗುಡ್ಡ
ಶ್ರೀ ವೀರಣ್ಣಗೌಡ ನೀರಮಾನ್ವಿ
ಶ್ರೀ ಸಿದ್ಧರಾಮ ಜಂಬಲದಿನ್ನಿ

ಇವರಿಗೆ ಅರ್ಪಣೆ

—**ಶಾಂತರಸ**

# ಪ ರಿ ವಿ ಡಿ


ಪ್ರಕಾಶಕರ ಮಾತು i

ನಮ್ಮ ಮಹಾದಾನಿಗಳು ಮಹಾಪೋಷಕರು ii

ಸಂಪಾದಕನ ಮಾತು xii

ಬಸವಶತಕವನ್ನು ಕುರಿತು... xvii

ಪ್ರಸ್ತಾವನೆ ೧

ಬಸವಶತಕ ೪೩

ಭುವನೈಕನಾಯಕೀ ಶತಕ ೬೫

ಪಂಪಾಶತಕ ೮೭

ಪದ್ಯಾರಂಭ ಸೂಚಿ ೧೦೯

ಕಠಿನ ಶಬ್ದಕೋಶ ೧೨೩



ವಿಭು (ಬಲಗಡೆ ಕುಳಿತವ) - ಎಡಗಡೆ ಕವಿಯು ಎದುರಿಗೆ ಕುಳಿತವ ಆತನ ಗೆಳೆಯ - ಅಕ್ಕಸಾಲಿಗ



ಶ್ರೀ ಎಂ. ಕೆ. ರೂಪಕುಮಾರ ಸೌ. ಊರ್ಮಿಳಾ

ಇವರ ಮದುವೆಯ ಸವಿನೆನಪಿಗಾಗಿ 'ಮೂರು ಶತಕ' ವನ್ನು ಪ್ರಕಟಿಸಲಾಗಿದೆ
( ೧–೩–೧೯೭೩ )

# ಪ್ರಕಾಶಕರ ಮಾತು

ಕಲಬುರ್ಗಿಯ ಪೂಜ್ಯ ದೊಡ್ಡಪ್ಪ ಅಪ್ಪ ಅವರ ಆಶೀರ್ವಾದದಿಂದ ಪ್ರಾರಂಭವಾದ ಸತ್ಯಸ್ನೇಹ ಪ್ರಕಾಶನ ಚಿಗಿತು ದಾಂಗುಡಿಯಿಟ್ಟು ಸುಳಿದೆಗೆದು ಬೆಳೆದು ಹೂಬಿಡತೊಡಗಿದೆ. ೧೬ ನೆಯ ಹೂ, ಈ ಗ್ರಂಥ: ಸಂಗವಿಭು ವಿರಚಿತ ಮೂರುಶತಕ.

ಮಾದಾನಿಗಳಿಂದಲೇ ನಮ್ಮ ಪ್ರಕಾಶನ ಸಂಸ್ಥೆ ಉಳಿದು ಬೆಳೆಯುತ್ತಲಿದೆ. ಈ ಶರಣ–ದಾಸರ ನಾಡಿನಲ್ಲಿ ಸಾಹಿತ್ಯ ಪ್ರೇಮಿಗಳಿಗೆ, ದಾನಿಗಳಿಗೆ ಕೊರತೆಯಿಲ್ಲ–ಎಂಬುದು ನಮ್ಮ ಅನುಭವಕ್ಕೆ ಬಂದಿದೆ.

ಸಂಗವಿಭುವಿನ ಮೂರುಶತಕಗಳು ಈ ಮೊದಲು ಬಿಡಿ ಬಿಡಿಯಾಗಿ ಪ್ರಕಟವಾದುವು. ಅವುಗಳ ಪ್ರಕಟನೆಗೆ ನೆರವಿತ್ತವರು ಇವರು :

ಬಸವಶತಕವನ್ನು ಧಾರವಾಡದ ಮುರುಘಾಮಠದಿಂದ ಪೂಜ್ಯ ಮಹಾಂತಪ್ಪಗಳವರು ಪ್ರಕಟಿಸಿ ಸಂಗವಿಭುಕವಿಯ ಕಾವ್ಯಪ್ರಕಟನೆಗೆ ಆಶೀರ್ವದಿಸಿದರು.

ಭುವನೈಕನಾಯಕಿಶತಕವನ್ನು ಶ್ರೀಯುತರುಗಳಾದ ಬಸವನಗೌಡ ಕರಡಿಗುಡ್ಡ ಮತ್ತು ಬಸವಂತರಾವ್ ಪಾಟೀಲ ಡಿ. ಎಸ್. ಪಿ., ಕೊಪ್ಪಳ ಅವರು ತಮ್ಮ ಮಕ್ಕಳ ಮದುವೆಯ ನೆನಪಿಗೆ ಪ್ರಕಟಿಸಲು ನೆರವಿತ್ತರು.

ಪಂಪಾಶತಕವನ್ನು ಶ್ರೀ ಮಲ್ಲಿಕಾರ್ಜುನಪ್ಪ ಅಸಿಸ್ಟೆಂಟ್ ಇಂಜಿನಿಯರ್, ಗುಲಬರ್ಗಾ ಮತ್ತು ಅವರ ಮಡದಿ ಶ್ರೀಮತಿ ಈಶ್ವರಮ್ಮ ತಮ್ಮ ಮಗ ಶ್ರೀ ಮಹಾಂತಕುಮಾರರ ಮದುವೆಯ ಸವಿನೆನಪಿಗಾಗಿ ಪ್ರಕಟಿಸಲು ನೆರವಿತ್ತರು.

—ಇವರೆಲ್ಲರಿಗೆ ನಮ್ಮ ಅಂತಃಕರಣದ ನೆನಕೆಗಳು.

ಈಗ ಸಂಗವಿಭುವಿನ ಮೂರು ಶತಕಗಳು ಪರಿಷ್ಕಾರಗೊಂಡು "ಮೂರುಶತಕ" ಎಂಬ ಹೆಸರಿನಿಂದ ಒಂದೇ ಗ್ರಂಥದಲ್ಲಿ ಪ್ರಕಟವಾಗುತ್ತಿವೆ. ತಮ್ಮ ಮಗಳು ಚಿ॥ ಕುಂ॥ ಸೌ॥ ಊರ್ಮಿಳಾ ಅವರ ಮದುವೆಯ ಸವಿನೆನಪಿಗಾಗಿ ಈ ಗ್ರಂಥವನ್ನು ಪ್ರಕಟಿಸಲು ಇದರ ಅಚ್ಚಿನ ಸಂಪೂರ್ಣ ವೆಚ್ಚವನ್ನು (ರೂ. ೨೫೦೦–೦೦) ವಹಿಸಿ ರಾಯಚೂರಿನ ಶ್ರೀ ಸೋಮಾ ರಾಮನಗೌಡರು ಉಪಕರಿಸಿದ್ದಾರೆ.

ಶ್ರೀ ಶಿವರಾಜ ಪಾಟೀಲ ಅಡ್ವೊಕೇಟ್, ಡಾ. ಎಸ್. ಬಿ. ಅಮರಖೇಡ, ಶ್ರೀ ದೇವೇಂದ್ರಪ್ಪ ಅಸಿಸ್ಟೆಂಟ್ ಇಂಜಿನಿಯರ್ ಮತ್ತು ಡಾ. ಎ. ಶಂಕರ ಇವರು ಮಹಾಪೋಷಕರಾಗಿ ಪ್ರೋತ್ಸಾಹಿಸಿದ್ದಾರೆ.

—ಇವರಿಗೆ ನಮ್ಮ ತುಂಬುಹೃದಯದ ನೆನಹುಗಳನ್ನು ಸಲ್ಲಿಸುತ್ತೇವೆ. ಈ ಪುಣ್ಯಪುರುಷರ, ಕೊಡುಗೈವೀರರ ಸಂಕ್ಷಿಪ್ತ ಪರಿಚಯ ಬೇರೆ ಕಡೆಗೆ ಕೊಡಲಾಗಿದೆ.

ನಮ್ಮ ಪ್ರಕಾಶನ ಸಂಸ್ಥೆ ಬೆಳೆಯಲು ಪ್ರೀತಿಯಿಂದ ಸಹಕರಿಸಿ ಹಲವು ವಿಧದಿಂದ ಪ್ರೋತ್ಸಾಹಿಸುತ್ತಿರುವ ಶ್ರೀ ತಿಮ್ಮಯ್ಯನವರನ್ನು ನಾವು ನೆನೆಯದೆ ಇರಲಾರೆವು.

ಗ್ರಂಥವನ್ನು ಅಂದವಾಗಿ ಅಚ್ಚುಮಾಡಿಕೊಟ್ಟ ಜನತಾ ಪ್ರಿಂಟರಿಯ ಒಡೆಯರಾದ ಶ್ರೀ ಪಿ. ಬಸಣ್ಣನವರನ್ನು ನಾವು ಅಂತಃಕರಣದಿಂದ ಸ್ಮರಿಸುವೆವು.

**ಪ್ರಕಾಶಕರು**

## ನಮ್ಮ ಮಹಾದಾನಿಗಳು – ಮಹಾಪೋಷಕರು

# ಭಾರತೀಯ ಸಂಸ್ಕೃತಿಯ ಜೀವಂತಮೂರ್ತಿ
# ರಾಯಚೂರಿನ ಶ್ರೀ ಸೋಮಾ ರಾಮನಗೌಡರು

ಅನ್ನವನು ಇಕ್ಕುವುದು ನನ್ನಿಯನು ನುಡಿಯುವುದು
ತನ್ನಂತೆ ಪರರ ಬಗೆದಡೆ ಕೈಲಾಸ
ಬಿನ್ನಾಣವಕ್ಕು ಸರ್ವಜ್ಞ

ಸರ್ವಜ್ಞನ ಮೇಲಿನ ವಚನ ಕನ್ನಡತನವನ್ನೊಳಗೊಂಡ ಭಾರತೀಯ ಸಂಸ್ಕೃತಿಯ ಸಾರ ಸರ್ವಸ್ವ. ಈ ಸಂಸ್ಕೃತಿಯ ಸಾಕಾರ ರೂಪವಾಗಿದ್ದಾರೆ ರಾಯಚೂರಿನ ಶ್ರೀ ಸೋಮಾ ರಾಮನಗೌಡರು.

ಶ್ರೀ ಸೋಮಾ ರಾಮನಗೌಡರು ಆಗರ್ಭಶ್ರೀಮಂತರು. ಅವರ ಶ್ರೀಮಂತಿಕೆಯಲ್ಲಿ ಒಂದು ಹೆಚ್ಚಿನ ಗುಣವಿದೆ. ಅವರ ಮನೆಯ ಲಕ್ಷ್ಮಿಯು ಸರಸ್ವತಿಪ್ರಿಯಳು; ಆಕೆ ತ್ಯಾಗ ವಿನಯಗಳನ್ನು ಉಸಿರಾಡಿಸುವಳು; ದ್ವೇಷ ಮತ್ಸರವನ್ನು ಆಕೆ ಅರಿಯಳು.

" ಕೊಡುವುದನ್ನೇ ಕೊಡು " ಎಂದು ಮಹಾಕವಿ ಸಂಗವಿಭು ಪಾರ್ವತಿಯನ್ನು ಬೇಡುತ್ತಾನೆ. ಈ " ಕೊಡುವುದನ್ನೇ " ಪಡೆದು ಬಂದವರು ಶ್ರೀ ಸೋಮಾ ರಾಮನಗೌಡರು. ದೇಹಿ ಎಂದು ಅವರಲ್ಲಿಗೆ ಹೋದವರು ಯಾರೂ ಬರಿಗೈಯಲ್ಲಿ ನಿರಾಶರಾಗಿ ಬಂದಿಲ್ಲ. ಆದರೆ ದಾನದ ಮರ್ಮ ಅವರಿಗೆ ಗೊತ್ತು. " ಸೊಡರೆಣ್ಣೆ ತೀರಿದರೆ ಕೊಡಸೆತ್ತಿ ಸುರಿದಿಹರೆ। ಕೊಡಬೇಡ ಕೊಡದೆ ಇರಬೇಡ ದಾನವನು ಬಿಡಬೇಡ। " ಎಂಬ ಸರ್ವಜ್ಞನ ವಚನವನ್ನೇ ಅವರು ನಡೆಯುತ್ತಿದ್ದಾರೆ. ಅವರವರಿಗೆ ಉಚಿತವಾದುದನ್ನು ಅವರವರ ಬೇಡಿಕೆಗೆ ತಕ್ಕಷ್ಟನ್ನು ಅವರು ನಿರ್ವ್ಯಾಜದಿಂದ ಕೊಡುತ್ತಾರೆ; ಕೊಟ್ಟು ಮರೆಯುತ್ತಾರೆ. ಆಡದೆ ಕೊಡುವ ಹಿರಿಯಗುಣ ಅವರದು. ಆಗ ಬಾ ಈಗ ಬಾ ಹೋಗಿ ಬಾ ಎಂಬುದು ಅವರಿಗೆ ಗೊತ್ತೇ ಇಲ್ಲ. ಮದುವೆ, ಮುಂಜಿ, ಮಠ, ಮಂದಿರ, ಶಾಲೆ, ಕಾಲೇಜು, ಸಾಹಿತ್ಯ, ಕಲೆ, ಧರ್ಮ, ಆಟ, ವಿನೋದಾವಳಿ — ಹೀಗೆ ಅವರ ದಾನದ ಹರಹು : ಅದಕ್ಕೆ ಅನಂತಮುಖ. ಅವರ ಹುಟ್ಟಿದೂರಾದ ಕ್ಯಾತನೂರಿನಲ್ಲಿ ೧೮ ವರ್ಷಗಳ ಹಿಂದೆ ಭವ್ಯವಾದ ರಾಮಮಂದಿರವನ್ನು ಕಟ್ಟಿಸಿದರು. ತಾರಾನಾಥ ಶಿಕ್ಷಣ ಸಂಸ್ಥೆಯ ಸೋಮಾ ಸುಭದ್ರಮ್ಮ ರಾಮನಗೌಡ ಮಹಿಳೆಯರ ಆರ್ಟ್ಸ್ ಕಾಲೇಜ್ ಸ್ಥಾಪನೆಗೆ ಅವರೇ ಕಾರಣರು. ಅದಕ್ಕೆ ರೂ. ೫೧೧೧೧ ದಾನವಿತ್ತರು. ಇಷ್ಟರಿಂದಲೇ ಅವರಿಗೆ ತೃಪ್ತಿ ಇಲ್ಲ. ಆ ಕಾಲೇಜನ್ನು ಸರ್ವಾಂಗ ಸುಂದರವಾಗಿ ರೂಪುಗೊಳಿಸಲು ಹಲವಾರು ಯೋಜನೆ

ಗಳನ್ನು ಹಾಕಿದ್ದಾರೆ; ನಾಡಿನಲ್ಲಿ ಅದನ್ನು ಒಂದು ಆದರ್ಶ ಕಾಲೇಜನ್ನಾಗಿ ಮಾಡಲು ನಿರ್ಮಲಾಂತಃಕರಣದಿಂದ ಶ್ರಮಿಸುತ್ತಿದ್ದಾರೆ. ಹಮ್ದರ್ದ ಹೈಸ್ಕೂಲಿನಲ್ಲಿ, ಯರಮರಸ್ ಸ್ಕೂಲಿನಲ್ಲಿ, ರಾಯಚೂರಿನ ಪೋಲೀಸ್ ಕಾಲನಿಯ ಪ್ರೈಮರಿ ಸ್ಕೂಲಿನಲ್ಲಿ ಒಂದೊಂದು ರೂಮನ್ನು ಕಟ್ಟಿಸಿಕೊಟ್ಟಿದ್ದಾರೆ. ಕಲ್ಲೂರು ಹೈಸ್ಕೂಲಿಗೆ ಐದು ಎಕರೆ ಭೂಮಿ ಕೊಟ್ಟಿದ್ದಾರೆ. ಕಾನ್ವೆಂಟ್ ಹೈಸ್ಕೂಲಿಗೆ ಎರಡು ಸಾವಿರ, ಪೋಲೀಸ್ ವೆಲ್‌ಫೇರ್ ಫಂಡಿಗೆ ಆರು ಸಾವಿರ ರೂಪಾಯಿ ದೇಣಿಗೆ ಕೊಟ್ಟಿದ್ದಾರೆ. ಮಂತ್ರಾಲಯದ ಪೂಜ್ಯ ರಾಘವೇಂದ್ರಸ್ವಾಮಿಗಳವರ ಗ್ರಂಥಕ್ಕೆ ಐದು ಸಾವಿರ ರೂ. ಅರ್ಪಿಸಿದ್ದಾರೆ. ಲೆಕ್ಕವಿಲ್ಲದಷ್ಟು ಸಾಹಿತಿಗಳಿಗೆ, ಕವಿಗಳಿಗೆ, ಸಂಗೀತಗಾರರಿಗೆ, ಕಲಾವಿದರಿಗೆ ತುಂಬು ಮನಸ್ಸಿನಿಂದ ನೆರವು ನೀಡಿದ್ದಾರೆ. ಪ್ರತಿವರ್ಷ ೬೦, ೭೦ ಕಾಲೇಜ್ ವಿದ್ಯಾರ್ಥಿಗಳಿಗೆ ಫೀ ಕೊಡುತ್ತಾರೆ. (ಅವರು ದಾನವಿತ್ತುದರಲ್ಲಿ ಕೆಲವನ್ನು ಮಾತ್ರ ಇಲ್ಲಿ ಹೇಳಲಾಗಿದೆ). ಹೆಚ್ಚಾಗಿ ಅವರ ನೆರವು ಬಡವರಿಗೆ. ಬಡವರ ಸೇವೆ ಅವರ ದೃಷ್ಟಿಯಲ್ಲಿ ದೇವರ ಸೇವೆ. ಜಾತಿ ಮತ ಪಕ್ಷ ಪಂಗಡ — ಇವು ಅವರರಿಯರು; ಭೇದಭಾವ ಅವರ ಹತ್ತಿರ ಸುಳಿಯದು. ಅವರ ಅಂತರಂಗಕ್ಕೆ ಗೊತ್ತಿರುವುದು ಮಾನವ ಧರ್ಮವೊಂದೇ. ಎಲ್ಲ ಮತ, ಎಲ್ಲ ಧರ್ಮಗಳಲ್ಲಿ ಅವರಿಗೆ ಗೌರವ; ಎಲ್ಲ ಧರ್ಮದವರಿಗೂ ಅವರಿಂದ ನೆರವು, ಸಹಕಾರ. ಅವರ ದಾನ ರಾಯಚೂರಿಗೆ, ಮೈಸೂರು ರಾಜ್ಯಕ್ಕೆ ಅಷ್ಟೇ ಸೀಮಿತವಾಗಿಲ್ಲ; ಉತ್ತರ ಹಿಂದುಸ್ತಾನಕ್ಕೂ ಅದು ವ್ಯಾಪಿಸಿದೆ. ಪ್ರತಿವರ್ಷ ಉತ್ತರ ಹಿಂದುಸ್ತಾನದಿಂದ ಸಾಧು ಸಂತರು ಬಂದು ಅವರಿಂದ ಸಹಾಯ ಪಡೆಯುತ್ತಾರೆ. ರಾಯಚೂರಿನಲ್ಲಿ ಯಾವ ಮಹತ್ವದ ಕೆಲಸ ನಡೆದರೂ ಶ್ರೀ ಸೋಮಾ ರಾಮನಗೌಡರ ಅಂತಃಕರಣಪೂರಿತ ನೆರವು ಅದಕ್ಕೆ ಇದ್ದೇ ಇರುತ್ತದೆ.

ಆಲಂಪೂರು ತಾಲೂಕಿಗೆ (ರಾಜ್ಯಪುನರ್ವಿಂಗಡಣೆಗಿಂತ ಮುಂಚೆ ಈ ತಾಲೂಕ ರಾಯಚೂರು ಜಿಲ್ಲೆಗೆ ಸೇರಿತ್ತು) ಸೇರಿದ ಕ್ಯಾತನೂರು ಇವರ ಹುಟ್ಟಿದೂರು. ಸೋಮಾ ನಾಗನಗೌಡರು ಇವರ ತಂದೆ. ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡರು. ದೊಡ್ಡಪ್ಪನವರಾದ ಶ್ರೀ ಸೋಮಾ ಪುಲ್ಲಯ್ಯನವರ ಆಶ್ರಯದಲ್ಲಿ ಬೆಳೆದರು. ಶ್ರೀ ಸೋಮಾ ಪುಲ್ಲಯ್ಯನವರಿಗೆ ಆಲಂಪೂರು ಮತ್ತು ರಾಯಚೂರು ಎರಡು ಕಡೆ ಆಸ್ತಿ ಇತ್ತು. ಅವರು ರಾಮನಗೌಡರನ್ನು ತಮ್ಮ ಮಕ್ಕಳಿಗಿಂತಲೂ ಹೆಚ್ಚು ಪ್ರೀತಿಯಿಂದ ಬೆಳಿಸಿದರು.

ಶ್ರೀ ಸೋಮಾರಾಮನಗೌಡರ ಪ್ರಾಥಮಿಕ ಅಭ್ಯಾಸ ಆಲಂಪೂರದಲ್ಲಾಯಿತು. ಆ ಬಳಿಕ ಅವರು ಸಿಕಂದ್ರಾಬಾದಿನಲ್ಲಿ ಎಸ್. ಎಸ್ ಎಲ್. ಸಿ. ಮುಗಿಸಿದರು. ಆಟಗಳಲ್ಲಿ ಇವರಿಗೆ ತುಂಬ ಆಸಕ್ತಿ. ಕುದುರೆ ಸವಾರಿ ಮಾಡುವುದು, ಬೇಟೆಯಾಡುವುದು ಇವರಿಗಿಷ್ಟವಾದ ಹವ್ಯಾಸಗಳು. ಆದರೆ ಓದುವುದರಲ್ಲಿ ಇವರಿಗೆ ಎಲ್ಲಿಲ್ಲದ ಅಭಿರುಚಿ. ಅವರಿಗೆ ಅತಿಪ್ರಿಯವಾದ ವಿಷಯ ತತ್ವಜ್ಞಾನ. ಇಂದಿಗೂ ಅವರು

ಬಿಡುವಿನಲ್ಲಿ ಹೆಚ್ಚಾಗಿ ತತ್ವಜ್ಞಾನ ಮತ್ತು ಕಲೆಗಳಿಗೆ ಸಂಬಂಧಪಟ್ಟ ಗ್ರಂಥಗಳನ್ನು ಮತ್ತು ಶ್ರೇಷ್ಠ ಇಂಗ್ಲೀಷ ಕಾದಂಬರಿಗಳನ್ನು ಓದುತ್ತಾರೆ. ಈ ವ್ಯಾಸಂಗ ಇವರ ಜೀವನಕ್ಕೆ ಒಂದು ವಿನೂತನ ಶೋಭೆ ತಂದಿದೆ.

ಎಸ್. ಎಸ್. ಎಲ್. ಸಿ. ಮುಗಿದ ಬಳಿಕ ಶ್ರೀ ಪುಲ್ಲಯ್ಯಗೌಡರು ಇವರನ್ನು ರಾಯಚೂರಿಗೆ ಕರೆತಂದು ಉದ್ಯೋಗಕ್ಕೆ ಹಚ್ಚಿದರು. ಇಪ್ಪತ್ತನೆಯ ವರ್ಷದಲ್ಲಿ ಮದುವೆಯಾಯಿತು. ಶ್ರೀಮಂತಿಕೆಗೂ ವಿನಯ ಔದಾರ್ಯಗಳಿಗೂ ಬಹು ಹಿಂದಿನಿಂದ ಹೆಸರಾದುದು ರಾಯಚೂರಿನ ಬಾಜನಗೌಡರ ಮನೆತನ. ಬಾಜನಗೌಡರ ಮೊಮ್ಮಗಳು— ಮಾನಸಗಲ್ಲು ಶ್ರೀ ಎಲ್ಲನಗೌಡರ ಮಗಳು— ಶ್ರೀಮತಿ ಸುಭದ್ರಮ್ಮ ರಾಮನಗೌಡರ ಕೈಹಿಡಿದು ಮನೆತುಂಬಿದರು. ಅಂದಿನಿಂದ ರಾಮನಗೌಡರು ರಾಯಚೂರಿನಲ್ಲಿಯೇ ನೆಲಿಸಿದ್ದಾರೆ. ಅವರಿಗೆ ಏಳು ಜನ ಹೆಣ್ಣು ಮಕ್ಕಳು, ಒಬ್ಬ ಗಂಡು ಮಗ. ಸೋಮನಾಗರಾಜಗೌಡ ಈಗ ಸ್ನಾತಕ ವಿದ್ಯಾರ್ಥಿ; ತಂದೆಯಂತೆ ವಿನಯಶೀಲಸಂಪನ್ನ, ಆಟಗಳಲ್ಲಿ ತುಂಬ ಆಸಕ್ತಿ ಉಳ್ಳಾತ.

ಸಾಮಾಜಿಕ ಕೆಲಸಗಳೆಂದರೆ ಶ್ರೀ ಸೋಮಾರಾಮನಗೌಡರಿಗೆ ಬಹಳ ಇಷ್ಟ. ಯಾವ ಕೆಲಸ ಕೈಕೊಂಡರೂ ಅದು ಒಪ್ಪವಾಗಿ ಓರಣವಾಗಿ ಮುಗಿಯಬೇಕು; ಸಾರ್ವಜನಿಕರಿಗೆ ಅದರಿಂದ ಹಿತವಾಗಬೇಕು. ನಗರಸಭೆಯ ಅಧ್ಯಕ್ಷರಾಗಿ, ಗಾಲಿಬ್ ಶತಮಾನೋತ್ಸವವ ಅಧ್ಯಕ್ಷರಾಗಿ ಅವರು ಸೇವೆಗೈದಿದ್ದಾರೆ. ತಾರಾನಾಥ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾಗಿ ಅದು ನಡೆಸುತ್ತಿರುವ ಶಾಲಾ-ಕಾಲೇಜುಗಳಿಗೆ ಹೊಸಜೀವ ಬರಿಸುತ್ತಿದ್ದಾರೆ. ರೋಟರಿಕ್ಲಬ್ಬಿನ ಅಧ್ಯಕ್ಷರಾಗಿ ಜನಪ್ರಿಯರಾಗಿದ್ದಾರೆ. ೧೯೭೧, ಡಿಸೆಂಬರ್ ೪ ಮತ್ತು ೫ ನೆಯ ದಿನಾಂಕಗಳಂದು ನಡೆದ ರಾಯಚೂರು ಜಿಲ್ಲಾ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷರಾಗಿ ಅವರು ಮಾಡಿದ ಸೇವೆ ಮರೆಯುವಂತಹುದಲ್ಲ.

ಒಮ್ಮೆ ಶ್ರೀಸೋಮಾರಾಮನಗೌಡರನ್ನು ಕಂಡವರು ಎಂದೂ ಅವರನ್ನು ಮರೆಯುವುದಿಲ್ಲ. ಹವಣಾದ ಎತ್ತರ; ಎತ್ತರಕೊಪ್ಪುವಗಾತ್ರ; ದುಂಡುಮುಖ; ಎಣ್ಣೆಗೆಂಪು. ತೃಪ್ತಭಾವ. ಸದಾ ತುಟಿಗಳಲ್ಲಿ ಎಳನಗೆಯ ಮಿನುಗು. ಜೀವನವನ್ನು ಆಳವಾಗಿ ಕಂಡು ಅರಿತ ಅರಿವಿನ ಬೆಳಕಿನಿಂದ ಕೂಡಿದ ಕಣ್ಣುಗಳು. ಹಿತಮಿತವಾದ ಮಾತುಗಳು. ಮಾತಿನ ಮಧ್ಯೆ ಸುಸಂಸ್ಕೃತಿಯನ್ನು ಸದಭಿರುಚಿಯನ್ನು ಚಿಮ್ಮುವ ತುಂಬುನಗೆ. ಸಾಹಿತ್ಯ, ಸಂಗೀತ, ಕಲೆ, ಶಿಲ್ಪ, ಜಾನಪದಕಲೆ, ರಾಜಕಾರಣ, ಶಿಕ್ಷಣ, ಧರ್ಮ— ಯಾವ ವಿಷಯವೇ ಇರಲಿ ಅವರವು ಅನುಭವದ ಮಾತುಗಳು. ಅವರೊಡನೆ ಮಾತಾಡುವುದೆಂದರೆ ಒಂದು ಅತ್ಯಂತ ಆನಂದದ ಸಂಗತಿ. ಸ್ನೇಹ ಸರಸ ಸಜ್ಜನಿಕೆಗೆ ಶ್ರೀ ಸೋಮಾರಾಮನಗೌಡರಿಂದ ಹೊಸಜೀವ ಬಂದಿದೆ.

ಅವರ ಡ್ರಾಯಿಂಗ್ ರೂಮ್ ನೋಡಿದರೆ ಸಾಕು— ಅವರ ಸುಸಂಸ್ಕೃತ ಸದಭಿರುಚಿಯ ಸುಶೀಲ ಸಂಪನ್ನತೆಯ ದರ್ಶನವಾಗುವುದು. ಹಾವಟಿಗೆ ಏರುತ್ತಲೇ ಎದುರಿಗೆ ಗೋಡೆಯಲ್ಲಿ ಕಾಣುವುದು ಶ್ರೀ ವೆಂಕಟೇಶ್ವರ ಸುಂದರ ಮೂರ್ತಿ. ಗೋಡೆಯ ತುಂಬ ಎಲ್ಲೋರಾ, ಅಜಂಟಾ, ಬಾದಾಮಿ, ಹಳೆಬೀಡು ಮುಂತಾದ ಶಿಲ್ಪಗಳ ಫೋಟೋಗಳು. ಅಲ್ಲಲ್ಲಿ ಒಪ್ಪ ಓರಣವಾಗಿಟ್ಟ ಕಲಾಕೃತಿಗಳು. ಬಂದವರಿಗೆ ಅತಿ ಚೆಲುವಾದ ಬಟ್ಟಲ (ಕಪ್) ಗಳಲ್ಲಿ ಚಹ; ಸರಸ ಸ್ನೇಹ ಅಂತಃಕರಣದ ಮಾತುಗಳು. ದೊಡ್ಡವರಿರಲಿ, ಸಣ್ಣವರಿರಲಿ, ಶ್ರೀಮಂತರಿರಲಿ, ಬಡವರಿರಲಿ— ಯಾರೇ ಇರಲಿ ಅದೇ ಸ್ನೇಹ, ಅದೇಪ್ರಿತಿ, ಅದೇ ಆದರ.

ಶ್ರೀ ಸೋಮಾರಾಮನಗೌಡರು ಅಜಾತಶತೃಗಳು. ಅವರು ವೈರಸಾಧಿಸಿದ್ದನ್ನು ಯಾರೂ ಅರಿಯರು; ವೈರಸಾಧಿಸಿದವರಿಗೆ ಅವರು ಪ್ರೀತಿಯನ್ನೇ ತೋರಿಸಿದ್ದಾರೆ. "ವೈರವನ್ನು ಪ್ರಿತಿಯಿಂದ ಗೆಡೆ" ಎಂಬ ಆರ್ಷೇಯ ವಾಣಿಯನ್ನು ಅವರು ನಡೆಯುತ್ತಿದ್ದಾರೆ.

ಏನೆಲ್ಲ ಮಾಡಿದರೂ ಅವರಿಗೆ ಸ್ವಂತದ ದೃಷ್ಟಿಯಿಂದ ಏನೂ ಬೇಕಿಲ್ಲ. ತನ್ನದೆಂಬುದು ಏನೂ ಅವರಿಗಿಲ್ಲ. ಅವರ ಎಲ್ಲ ಕಾರ್ಯಗಳಲ್ಲಿ ಜನರ, ರಾಜ್ಯದ, ರಾಷ್ಟ್ರದ ಹಿತದ ದೃಷ್ಟಿ ಇರುತ್ತದೆ.

ನಂಬಿದವರಿಗೆ ಭೀಮರಕ್ಷೆ ಶ್ರೀ ಸೋಮಾ ರಾಮನಗೌಡರು. ಒಳ್ಳೆಯದು ಎಲ್ಲಿಯೇ ಇರಲಿ, ಯಾವ ರೂಪದಲ್ಲಿಯೇ ಇರಲಿ ಅದನ್ನು ಕಂಡು ಆನಂದಿಸಿ ಆತ್ಮೀಯತೆಯ ಮಳೆಗರೆವ ಹಿರಿಯ ಗುಣ ಅವರದು. ಅವರ ಆಶ್ರಯದಲ್ಲಿ ಸಂಪರ್ಕದಲ್ಲಿ ಬಂದವರು ಬಾಳಿಗೆ ಗೆಲುವನ್ನು ಪಡೆದಿದ್ದಾರೆ. ಜಾತಿ, ಮತ ಪಂಥ ಭಾಷೆ — ಯಾವ ಎಲ್ಲೆಯೂ ಇಲ್ಲ ಅವರ ಆಶ್ರಯ ಗುಣಕ್ಕೆ, ಸೌಹಾರ್ದಕ್ಕೆ, ಮಾನವತೆಗೆ. ಕಲ್ಲೂರಿನ ಶ್ರೀ ತಿಮ್ಮಯ್ಯನವರನ್ನು ಚಿಕ್ಕಂದಿನಿಂದ ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಪೋಷಿಸಿದರು; ಓದಿಸಿದರು. ತಮ್ಮ ಆತ್ಮೀಯತೆಯಿಂದ ಅವರ ಸುಂದರ ವ್ಯಕ್ತಿತ್ವ ರೂಪುಗೊಳ್ಳಲು ಅನುವುಮಾಡಿಕೊಟ್ಟರು; ಹೊಟ್ಟೆಯ ಮಕ್ಕಳಿಗಿಂತಲೂ ತಿಮ್ಮಯ್ಯನವರ ಮೇಲೆ ಅವರಿಗೆ ಹೆಚ್ಚಿನ ಪ್ರೀತಿ. ಶ್ರೀ ತಿಮ್ಮಯ್ಯನವರ ಮದುವೆ ಬಹು ವೈಭವದಿಂದ ಮಾಡಿದರು: ಶ್ರೀ ರಾಮನಗೌಡರ ಔದಾರ್ಯ ಪ್ರೀತಿ ತೋರಿಸುವ ಅದೊಂದು ಐತಿಹಾಸಿಕ ಸಂಗತಿ. ಪದವೀಧರರಾದ ಶ್ರೀ ತಿಮ್ಮಯ್ಯನವರು ಕಾರ್ಯದಕ್ಷರು, ಕಾರ್ಯಕ್ಷಮತೆಯುಳ್ಳವರು. ಸ್ನೆಹ ಜೀವಗಳು. ಪ್ರಾಮಾಣಿಕತೆಗೆ ಅವರು ಇನ್ನೊಂದು ಹೆಸರು.'ಅವರು ಶ್ರೀ ರಾಮನಗೌಡರಿಗೆ ಬಲಗೈಯಾಗಿ ಅವರ ವಿಶಾಲವಾದ ವ್ಯವಹಾರಗಳಲ್ಲಿ ಸೇವಾನಿರತರಾಗಿದ್ದಾರೆ.

ಶ್ರೀ ಸೋಮಾ ರಾಮನಗೌಡರು ರಾಷ್ಟ್ರದ ಹಿರಿಯ ಸಂಪತ್ತು.

# ನಮ್ಮ ಹೊಸ ಮಹಾ ಪೋಷಕರು

**ಶ್ರೀ ಶಿವರಾಜ ಪಾಟೀಲ,** ಬಿ. ಎಸ್. ಸಿ., ಎಲ್ಎಲ್. ಬಿ. ಅಡ್ವೋಕೇಟ್, ಗುಲ್ಬರ್ಗಾ

ಗುಲ್ಬರ್ಗಾದ ಅತ್ಯಂತ ಪ್ರತಿಭಾನ್ವಿತ, ಸಮರ್ಥ, ದಕ್ಷ ಅಡ್ವೋಕೇಟರಾದ ಶ್ರೀ ಶಿವರಾಜ ಪಾಟೀಲರ ಹುಟ್ಟಿದೂರು ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಮುಂದಕಲ್. ಶರಣರು, ದಾಸರು, ಮಹಾಕವಿಗಳಿಗೆ ಜನ್ಮಕೊಟ್ಟ ಭಾಗ್ಯ ದೇವದುರ್ಗ ತಾಲೂಕಿನದು. ಶರಣ—ದಾಸರ ಭಕ್ತಿ, ವಿನಯ, ಋಜುತೆ, ಕಿಂಕರತೆ, ಕವಿಗಳ ಶ್ರೀಮಂತ ಹೃದಯ ಶ್ರೀ ಶಿವರಾಜ ಪಾಟೀಲರಲ್ಲಿ ಮೂರ್ತೀ ಭವಿಸಿವೆ. ಕಲ್ಯಾಣದ ಶರಣರ ಸಂಸ್ಕೃತಿಯನ್ನು ಜೀವಂತವಾಗಿಟ್ಟಿರುವ ಕನ್ನಡ ನಾಡಿನ ಗೌದರ ಮನೆತನಗಳಲ್ಲಿ ಮುದರಕಲ್ಲಿನ ಶ್ರೀ ವಿರುಪಣ್ಣನವರ ಮನೆತನ ಹೆಸ ರಾದುದು. ಶ್ರೀ ವಿರುಪಣ್ಣನವರ ಪುತ್ರರೇ ಶ್ರೀ ಶಿವರಾಜ ಪಾಟೀಲರು.

ಶ್ರೀ ಪಾಟೀಲರದು ಎಲ್ಲಕಾಲಕ್ಕೂ ಶಿಸ್ತಿನ ಸಂಯಮದ ಸುಸಂಬದ್ಧ ಯೋಜ ನೆಯ ಜೀವನ. ವಿದ್ಯಾರ್ಥಿ ಜೀವನದಲ್ಲಿ ಶಿಕ್ಷಕರಿಗೂ ವಿದ್ಯಾರ್ಥಿಗಳಿಗೂ ಅಚ್ಚು ಮೆಚ್ಚಾದ ಪಾಟೀಲರು ಎಲ್ಲ ಕಾಲಕ್ಕೂ ವಿದ್ಯಾರ್ಥಿ ಸಂಘದ ಅಧ್ಯಕ್ಷರಾಗಿದ್ದರು. ಅವರ ಓದು ಜ್ಞಾನಾರ್ಜನೆಯ ಮುಖ್ಯವಾಗಿತ್ತೇ ಹೊರತು, ಅದಕ್ಕೆ ಕೇವಲ ಪರೀಕ್ಷೆಯ ದೃಷ್ಟಿಯಿರಲಿಲ್ಲ. ಅಂತೆಯೇ ಅವರು ವಿಶ್ವವಿದ್ಯಾಲಯದಿಂದ ಹೊರ ಬಂದಾಗ ಜ್ಞಾನ-ಅನುಭವ ಎರಡರ ಸಂಗಮವಾಗಿದ್ದರು.

ಶ್ರೀ ಶಿವರಾಜ ಪಾಟೀಲರು ಪುಣ್ಯವಂತರು; 'ಪಡೆದು ಬಂದವರು'. ಎಲ್ಎಲ್.ಬಿ ಮುಗಿಸಿ ಗುಲ್ಬರ್ಗಾದಲ್ಲಿ ನೆಲಸಿ ವಕಾಲತ್ ಕಾಯಕ ಕೈಕೊಂಡರು. ಪೂಜ್ಯ ದೊಡ್ಡಪ್ಪ ಅಪ್ಪ ಅವರ 'ಕರುಣೆ' ಪಾಟೀಲರಿಗೆ ದೊರಕಿತು. ಅಂದಿನಿಂದ ಅವರ ಜೀವನಕ್ಕೆ ಹೊಸತಿರುವು ಬಂತು.

ಶ್ರೀ ಪಾಟೀಲರದು ಹಲವು ಮುಖಗಳ ವ್ಯಕ್ತಿತ್ವ. ವಕಾಲತ್ ಕಾಯಕದಲ್ಲಿ ಅವರು ತಮ್ಮದೇ ಆದ ಒಂದು ವೈಶಿಷ್ಟ್ಯ ಪಡೆದಿದ್ದಾರೆ. ಬಹು ತೀಕ್ಷ್ಣಮತಿಗಳಾದ ಅವರು ಯಾವುದೇ ಕೆಲಸ ಕೈಕೊಂಡರೂ ಅವನ್ನು ತುಂಬು ಹೃದಯದಿಂದ ಮಾಡಿ ಮುಗಿಸುವರು. ಕೋರ್ಟಿನಲ್ಲಿ ಅವರ ವಾಗ್ವೈಖರಿಯನ್ನು ಕೇಳಿ ಸಂತೋಷಪಡ ಬೇಕು. ನ್ಯಾಯಕ್ಕಾಗಿ ಅವರಾಡುವ ಮಾತುಗಳು ಆಧಾರಪೂರ್ಣವಾಗಿ, ಪ್ರಮಾಣ ಬದ್ಧವಾಗಿ, ತೂಕವಾಗಿ ಅಷ್ಟೇ ಪ್ರಭಾವವುಳ್ಳವಾಗಿರುತ್ತವೆ. ಪಾಟೀಲರಿಗೆ ಗಟ್ಟಿ ಕಾಳು ಒಂದೇ ಗೊತ್ತು; ಜೊಳ್ಳು ಅವರರಿಯರು. ಅವರು ಉತ್ತಮ ವಾಗ್ಮಿಗಳು. ಕನ್ನಡ ಮತ್ತು ಇಂಗ್ಲೀಷಿನಲ್ಲಿ ನಿರರ್ಗಳವಾಗಿ ಮಾತನಾಡುವರು. ಅವರ ಮಾತಿನಲ್ಲಿ ಒಂದು ಮೋಡಿ ಇದೆ; ಅದು ಸಾವಿರಾರು ಜನರ ಹೃದಯಗಳನ್ನು ಆಕರ್ಷಿಸುತ್ತದೆ. ಅವರು ಎಸ್. ಬಿ. ಕಾಮರ್ಸ್ ಕಾಲೇಜಿನಲ್ಲಿ ಕೆಲವು ವರ್ಷ ಮರ್ಕಂಟೈಲ್‌ಲಾ ಕಲಿ

ಸಿದರು; ಗುಲ್ಬರ್ಗಾದ ಲಾ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಇಂದಿಗೂ ಬೋಧಿಸುತ್ತಾರೆ. ಅವರು ಹೈದರಾಬಾದ್ ಕರ್ನಾಟಕ ಎಜ್ಯುಕೇಶನ್ ಸುಸೈಟಿ, ಗುಲ್ಬರ್ಗಾದ ಡಿಸ್ಟ್ರಿಕ್ಟ್ ಇಂಡಸ್ಟ್ರಿಯಲ್ ಬ್ಯಾಂಕ್, ಸೆಂಟ್ರಲ್ ಬ್ಯಾಂಕ್, ಜನತಾ ಬಜಾರ ಇವುಗಳ ಲೀಗಲ್ ಎಡ್ವೈಜರ್ ಆಗಿದ್ದಾರೆ. ಸಂಗಮೇಶ್ವರ ವೆಲ್ ಫೇರ್ ಸುಸೈಟಿಯ ಸ್ಥಾಪಕ ಅಧ್ಯಕ್ಷರಾಗಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದ Board of Studies in law ಈ ಸಮಿತಿಯ ಸದಸ್ಯರಾಗಿದ್ದಾರೆ. ಕಲಬುರ್ಗಿಯ ಶ್ರೀ ಶರಣ ಬಸವೇಶ್ವರ ಅನುಭವಮಂಟಪದ ಸಂಸ್ಥಾಪಕ ಸದಸ್ಯರೂ ಕಾರ್ಯದರ್ಶಿಗಳೂ ಆಗಿ ದುಡಿಯುತ್ತಿದ್ದಾರೆ.

ಶ್ರೀ ಪಾಟೀಲರು ಉತ್ತಮ ಬರಹಗಾರರು. ಸುಸಂಸ್ಕೃತ ಶೈಲಿ ಅವರದು. ಶ್ರೀ ಶರಣಬಸವೇಶ್ವರ ಚರಿತ್ರೆ ಅವರ ಚಿಕ್ಕ ಗ್ರಂಥ; ಅದರಲ್ಲಿ ಸುಂದರವಾಗಿ ಶ್ರೀ ಶರಣರ ಚರಿತ್ರೆ ಹೆಣೆದಿದ್ದಾರೆ. ಅವರು ಮನಸ್ಸು ಮಾಡಿದರೆ, ಬಿಡುವಿಲ್ಲದ ಕಾರ್ಯದಲ್ಲಿ ಬಿಡುವು ಮಾಡಿಕೊಂಡು ಬರೆದರೆ ಕನ್ನಡ ಸಾಹಿತ್ಯಕ್ಕೆ ಖಂಡಿತವಾಗಿ ಶ್ರೀಮಂತಿಕೆ ತಂದುಕೊಡುವರು.

ಆತ್ಮೀಯ ನಗೆಯ, ಮೃದು ಮಾತಿನ, ಸೌಜನ್ಯ ಸೌಹಾರ್ದಗಳ ತವರಾದ ಶ್ರೀ ಶಿವರಾಜ ಪಾಟೀಲರಿಗೆ ಸಂಗೀತ ಸಾಹಿತ್ಯಗಳೆಂದರೆ ಬಹು ಪ್ರೀತಿ. ನಿರ್ಮಲಾಂತಃಕರಣದಿಂದ ಅವರು ಸಾಹಿತಿಗಳಿಗೆ ಕಲಾವಿದರಿಗೆ ನೆರವು ನೀಡುತ್ತಾರೆ. ಕಲಬುರ್ಗಿ ಮಹಾನಗರದ ಸತ್ವದ, ಪ್ರತಿಭೆಯ, ಚೇತನದ ಪ್ರತೀಕವಾದ ಶ್ರೀ ಪಾಟೀಲರು ನಾಡು-ನುಡಿ-ರಾಷ್ಟ್ರದ ನಿರ್ಮಾಣ ಕಾರ್ಯದಲ್ಲಿ ಸದ್ದು ಗದ್ದಲವಿಲ್ಲದಂತೆ ಶ್ರಮಿಸುತ್ತಿದ್ದಾರೆ.

**ಡಾ. ಎಸ್. ಬಿ. ಅಮರಖೇಡ,** ಎಂ.ಬಿ.ಬಿ.ಎಸ್., ಎಂ.ಎಸ್., ರಾಯಚೂರು

ರಾಯಚೂರಿನ ಅತ್ಯಂತ ಜನಪ್ರಿಯರೂ ಖ್ಯಾತ ಡಾಕ್ಟರರೂ ಆಗಿರುವ ಡಾ. ಎಸ್. ಬಿ. ಅಮರಖೇಡ ಅವರು ವಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನ ಒಡವಡಗಿಯವರು. ವೀರತನ, ದಾಸೋಹ, ತ್ಯಾಗ, ವಿನಯಗಳಿಗೆ ಹೆಸರಾದ ಕನ್ನಡ ನಾಡಿನ ಗೌಡರ ಮನೆತನಗಳಲ್ಲಿ ಡಾ. ಅಮರಖೇಡರ ಮನೆತನವೂ ಒಂದು; ಮನೆತನದ ಈ ಎಲ್ಲ ಗುಣಗಳೂ ಅವರಿಗೆ ಹುಟ್ಟಿನಿಂದಲೇ ಬಂದಿವೆ; ಶರಣರ ಕ್ರಾಂತಿ ಗಂಗೋತ್ರಿಯಾದ ಅಕ್ಕನಾಗಮ್ಮ, ಬಸವಣ್ಣ ಮತ್ತು ಇನ್ನಿತರ ಶರಣರನ್ನು ಲೋಕಕ್ಕೆ ಕೊಟ್ಟ ವಿಜಾಪುರ ಜಿಲ್ಲೆಯ ನೆಲದ ಗುಣಗಳಾದ ಜಿಗುಟುತನ, ನಯದಿಂದ ಕೂಡಿದ ಕೆಚ್ಚು, ವಿಜಿಗೀಷು ವೃತ್ತಿ ಇವು ಡಾ. ಅಮರಖೇಡರಲ್ಲಿ ಮೈಗೂಡಿ ಬಂದಿವೆ; ಅಲ್ಲದೆ ತೆರೆದ ಕಣ್ಣಿನಿಂದ ವಿಶಾಲ ಮನೋಭಾವನೆಯಿಂದ

ಜೀವನವನ್ನು ನೋಡಿದ ಶರಣರ ಧೀರ - ವಿಶಾಲ ಗುಣಗಳೂ ಅವರಲ್ಲಿ ಬೆಳೆದು ಬಂದಿವೆ.

ವಿದ್ಯಾರ್ಥಿ ಜೀವನದಲ್ಲಿ ಡಾ. ಎಸ್. ಬಿ. ಅಮರಖೇಡರು ಅನೇಕ ಪ್ರಥಮಗಳನ್ನು, ಪ್ರಥಮದಲ್ಲಿ ಪ್ರಥಮಗಳನ್ನು ಸಾಧಿಸಿದ್ದಾರೆ. ಮ್ಯಾಟ್ರಿಕ್‌ನಲ್ಲಿ ಎಲ್ಲ ವಿಷಯಗಳಲ್ಲಿ Distinction ಗಳಿಸಿದರು. ಇಂಟರ್ ಸಾಯಿನ್ಸ್‌ನಲ್ಲಿ ಪ್ರಥಮ ಶ್ರೇಣಿ ಪಡೆದರು. ಮುಂಬಯಿ ವಿಶ್ವವಿದ್ಯಾಲಯದಿಂದ ಎಂ.ಬಿ.ಬಿ.ಎಸ್. ಮತ್ತು ಎಂ.ಎಸ್. ಪದವಿಗಳನ್ನು ಗಳಿಸಿ ಅವರು ಸರಕಾರಿ ನೌಕರಿಯಲ್ಲಿ ಪದಾರ್ಪಣ ಮಾಡಿದರು. ಬೆಂಗಳೂರಿನ ಬವರಿಂಗ ಆಸ್ಪತ್ರೆಯಲ್ಲಿ ಅವರು ಒಂದು ವರ್ಷ ಇದ್ದರು. ಆ ಒಂದು ವರ್ಷದಲ್ಲಿ ಅವರು ಅಲ್ಲಿ ಗಳಿಸಿದ ಜನಪ್ರಿಯತೆ ವೈದ್ಯಲೋಕದ ಒಂದು ದಿವ್ಯ ಆದರ್ಶ.

೧೯೬೫ ರಲ್ಲಿ ಅವರು ರಾಯಚೂರಿಗೆ ಬಂದರು – ಅಸಿಸ್ಟೆಂಟ್ ಸರ್ಜನರಾಗಿ. ಈ ಭಾಗದ ಜನತೆಯ ಭಾಗ್ಯ. ೧೯೬೭ ರಲ್ಲಿ ಸರಕಾರಿ ನೌಕರಿ ತ್ಯಜಿಸಿ " ಅಮರಖೇಡ ನರಸಿಂಗ್ ಹೋಮ್ " ಪ್ರಾರಂಭಿಸಿ ಸ್ವತಂತ್ರವೃತ್ತಿ ಕೈಕೊಂಡರು.

"ರೋಗಿಗಳು ನನ್ನ ದೇವರು; ವೈದ್ಯಕೀವೃತ್ತಿ ನನ್ನ ಶಿವಪೂಜೆ" ಎನ್ನುತ್ತಾರೆ ಡಾ. ಅಮರಖೇಡರು. ಮೃದು ಮಾತುಗಳಿಂದ, ವಿಶ್ವಾಸಪೂರ್ವಕ ಸಂತಯಿಕೆಯಿಂದ ಅವರು ರೋಗಿಗಳಲ್ಲಿ ಮನೋಬಲವನ್ನು ಹೆಚ್ಚಿಸುತ್ತಾರೆ. ರೋಗನಿದಾನದಲ್ಲಿ, ಶಸ್ತ್ರ ಚಿಕಿತ್ಸೆಯಲ್ಲಿ ಅವರದೇ ಆದ ಒಂದು ವೈಶಿಷ್ಟ್ಯವಿದೆ.

ಡಾ. ಅಮರಖೇಡರು ಬಹುಮುಖ ಪ್ರತಿಭೆಯುಳ್ಳವರು. ಸುವಿಚಾರಶೀಲರು; ಸೂಕ್ಷ್ಮಸಂವೇದನಾಶೀಲರು. ಯಾವುದೇ ವಿಷಯವನ್ನು ಸುಂದರವಾಗಿ ಅರ್ಥಪೂರ್ಣವಾಗಿ ಪೃಥಕ್ಕರಿಸುವ ಶಕ್ತಿ ಅವರಿಗಿದೆ; ಅವರೊಡನೆ ಮಾತಿಗೆ ತೊಡಗಿದರೆ ವಿಚಾರದ ರೀಲುಗಳನ್ನೇ ಅವರು ನಮ್ಮ ಮುಂದೆ ಓಡಿಸುತ್ತಾರೆ. ಸಾಹಿತ್ಯ, ಸಂಗೀತ, ಲಲಿತ ಕಲೆಗಳಲ್ಲಿ ಅವರಿಗೆ ಅಪಾರ ಆಸಕ್ತಿ. ಸಂಗೀತವೆಂದರೆ ಪಂಚಪ್ರಾಣ. ಸಾಹಿತಿಗಳಿಗೆ, ಕಲಾವಿದರಿಗೆ ಸರ್ವವಿಧದ ನೆರವು ಅವರದು.

ರಾಯಚೂರಿನ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ, ಸಾಹಿತ್ಯಿಕ, ಲೋಕಕಲ್ಯಾಣಕಾರಕ— ಯಾವುದೇ ಕೆಲಸವಿರಲಿ ಅಲ್ಲಿ ಡಾ. ಅಮರಖೇಡರು ಇದ್ದೇ ಇರುತ್ತಾರೆ. ರಾಯಚೂರಿನ ರೋಟರಿ ಕ್ಲಬ್ಬಿನ ಅಧ್ಯಕ್ಷರಾಗಿ ಅವರು ಬಹು ಹಿತದ ಕಾರ್ಯಗಳನ್ನೆಸಗಿದ್ದಾರೆ, ತಾರಾನಾಥ ಶಿಕ್ಷಣ ಸಂಸ್ಥೆಯ ಉಪಾಧ್ಯಕ್ಷರಾಗಿ, ಹಮ್ದರ್ದ ಹೈಸ್ಕೂಲು ಕಾರ್ಯಕಾರಿ ಮಂಡಳಿಯ ಅಧ್ಯಕ್ಷರಾಗಿ, ಮಹಾಂತೇಶ ಪ್ರಸಾದ ನಿಲಯದ ಕಟ್ಟಡದ ಅಧ್ಯಕ್ಷರಾಗಿ ಶಿಕ್ಷಣದ ಏಳ್ಗೆಗಾಗಿ, ಅಂತಃಕರಣಪೂರ್ವಕ ಶ್ರಮಿಸುತ್ತಿದ್ದಾರೆ.

“ಡಾಕ್ಟರರಾದವರು ರಾಷ್ಟ್ರಕ್ಕೆ ವೃತ್ತಿಯಿಂದ ವಿಚಾರದಿಂದ ಸಹೃದಯತೆ ಯಿಂದ ಬಹಷ್ಟು ಒಳ್ಳೆಯದನ್ನು ಮಾಡಬಹು. ಎಲ್ಲರಿಗಿಂತಲೂ ಅವರಿಗೆ ಅವಕಾಶ ಬಹಳ ಇರುತ್ತವೆ; ಅಲ್ಲದೆ ರಾಷ್ಟ್ರದ ಆರೋಗ್ಯ ಕಾಪಾಡುವವರು ಡಾಕ್ಟರರೆ” ಎಂದು ಅವರು ಹೇಳುತ್ತಾರೆ. ಅದರಂತೆ ನಡೆಯುತ್ತಿದ್ದಾರೆ. ಯಾವ ವೇಷವಿಲ್ಲದೆ, ಯಾವ ಪಕ್ಷಪಂಗಡವಿಲ್ಲದೆ, ಸದ್ದುಗದ್ದಲವಿಲ್ಲದೆ ತಮ್ಮ ವೃತ್ತಿಯಿಂದ, ವಿಚಾರ ಶೀಲತೆಯಿಂದ ರಾಷ್ಟ್ರ ಜೀವನ ರಚನೆಯಲ್ಲಿ ನಿರಂತರ ಭಾಗಿಗಳಾಗಿದ್ದಾರೆ— ಡಾ. ಅಮರಖೇಡರು.

**ಶ್ರೀ ಜಿ. ದೇವೇಂದ್ರಪ್ಪ,** ಅಸಿಸ್ಟೆಂಟ್ ಇಂಜಿನಿಯರ್ ಪಿ.ಡಬ್ಲ್ಯೂ.ಡಿ., ರಾಯಚೂರು

ಸಗರ ನಾಡು ಪ್ರಕೃತಿ ಸೌಂದರ್ಯ ದೇಹ ಸೌಂದರ್ಯ ಮತ್ತು ಆತ್ಮ ಸೌಂದರ್ಯಗಳಿಗೆ ಹೆಸರಾದುದು. ಇದು ಶರಣರ ನೆಲೆವೀಡು. ಶರಣರಿಗೆ ಮೂಲಿಗ ನಾದ ದೇವರ ದಾಸಮಯ್ಯ ಈ ಸೀಮೆಯವನೇ. ಈ ಶರಣರ ಭಕ್ತಿ, ಶಕ್ತಿ, ಜಿಗು ಟುತನ, ಚಿಂತನ, ಕ್ರಿಯೆ ಬಳುವಳಿಯಾಗಿ ಬಂದಿವೆ ಶ್ರೀ ಜಿ. ದೇವೇಂದ್ರಪ್ಪನವರಿಗೆ. ಶರಣರ ತತ್ವಗಳನ್ನು ಜೀವಂತವಾಗಿಟ್ಟಿರುವ ಕನ್ನಡನಾಡಿನ ಲಿಂಗವಂತ ಮನೆತನಗಳಲ್ಲಿ ಕಲಬುರ್ಗಿ ಜಿಲ್ಲೆಗೆ ಸೇರಿದ ಸುರಪುರ ತಾಲೂಕಿನ ರಂಗಂಪೇಟೆಯ ಶ್ರೀ ಜಿ. ದೇವೇಂದ್ರಪ್ಪನವರ ಮನೆತನವೂ ಒಂದು.

ಚಿಕ್ಕಂದಿನಿಂದಲೂ ಶ್ರೀ ದೇವೇಂದ್ರಪ್ಪನವರ ಒಲವು ‘ಧರ್ಮ, ದೇವರು’ ಗಳ ಕಡೆಗೆ. ಆದರೆ ಅವರ ಒಲವಿಗೆ ನೂರು ಚಿಂತನೆಯ ಕಣ್ಣುಗಳು. “ಹರಿವ ನದಿಯ ತೆರನಂತೆ” ಅವರ ಭಕ್ತಿ. ಜೀವನವನ್ನು ಅರಿತು, ಅದನ್ನು ಸುಂದರಗೊಳಿಸಿ ಆನಂದಿ ಸುವ ಧೀರ ಸುಂದರ ಹೃದಯ ಅವರದು. ಅವರ ಕಾಯಕ “ ಶಿಲ್ಪಕಾಯಕ. ” ಶಿಲ್ಪಿಗೆ ಬೇಕಾದ ರಚನಾಚಾತುರ್ಯ, ಕರ್ತೃತ್ವ ಶಕ್ತಿ, ನಿರ್ಮಾಣಪ್ರತಿಭೆ ಅವರಲ್ಲಿ ಸಾಕಷ್ಟಿವೆ. ಇದು ಬಹಿರಂಗದ ಕಾಯಕ. ಅವರ ಅಂತರಂಗದ ಕಾಯಕವೂ ಇದೇ ಬಗೆಯಾಗಿದೆ; ಸದುಹೃದಯಮಂದಿರರಚನೆ; ಅದರಲ್ಲಿ ದೇವದೇವನ ಪ್ರತಿಷ್ಠಾಪನೆ. ಅವರಿಗೆ ಕಾಯಕವೇ ಲಿಂಗಪೂಜೆ, ಲಿಂಗಪೂಜೆಯೇ ಕಾಯಕ.

ಪಿ. ಡಬ್ಲ್ಯೂ. ಡಿ. ಖಾತೆಯಲ್ಲಿ ಅವರ ಸೇವೆ ೨೭ ವರ್ಷಗಳದು. ಅವರ ಸತ್ಯ ಶುದ್ಧವಾದ ಕಾಯಕದ ಬದುಕು ರಾಷ್ಟ್ರಕ್ಕೆ ಹಿತಕಾರಿಯಾದುದು. ಅವರು ಸಮರ್ಥ ಆಡಳಿತಗಾರರು. ಬೇಸರವೆಂಬುದನ್ನು ಅವರರಿಯರು. ಕಾಯಕವೇ ಲಿಂಗಪೂಜೆ ಯಾದಾಗ ಬೇಸರದ ಮಾತೆಲ್ಲಿ?

“ನಾನು ತೃಪ್ತ” ಎನ್ನುತ್ತಾರೆ ಅವರು. ಈ ಮಾತಿನ ಧ್ವನಿಯಲ್ಲಿಯೇ ಒಂದು ಮೋಡಿಯಿದೆ. ಅವರ ಅಂತರಂಗದ ತೃಪ್ತಿಯನ್ನು ಆ ಧ್ವನಿ ಕೇಳುಗರ ಹೃದಯಕ್ಕೆ

ಮುಟ್ಟಿಸುತ್ತದೆ. ನಸು ಎತ್ತರದ ಕಾಯ; ಗೌರವರ್ಣ; ಮಿನುಗುವ ಕಂಗಳು; ತುಂಬುಕಾಂತಿಯ ಮೊಗ–ಅವರ ತೃಪ್ತಿಯ ಜೀವನವನ್ನು ಪಡಿಮೂಡಿಸುತ್ತವೆ. ತಡೆತಡೆದು ಬರುವ ಅವರ ಮಾತುಗಳು ಜೀವನದ ಆಳವಾದ ಅನುಭವವನ್ನು ಹಿಂಜಿ ಹಿಂಜಿ ತೋರಿಸುತ್ತವೆ.

ಸಂಗೀತ ಸಾಹಿತ್ಯಗಳಲ್ಲಿ ಶ್ರೀ ದೇವೇಂದ್ರಪ್ಪನವರಿಗೆ ಅಪಾರವಾದ ಅಭಿರುಚಿ. ಸದಾ ವ್ಯಾಸಂಗಿಗಳು. ಚಿಂತನ ಶೀಲ ಸಾಹಿತ್ಯ ಅವರಿಗೆ ಹೆಚ್ಚು ಇಷ್ಟ. ಕವಿಗಳಿಗೆ ಕಲಾವಿದರಿಗೆ ಸದಾ ಅವರ ನೆರವು ಇದ್ದುದೇ.

ಶ್ರೀ ದೇವೇಂದ್ರಪ್ಪನವರು ಪುಣ್ಯಜೀವಿಗಳು : ಅವರಿಗೆ 'ಸಾಕಾರ ಪರಬೊಮ್ಮವಾದ', ಲೋಕಮಾತೆಯಾದ ಸಜ್ಜಲಗುಡ್ಡದ ಶರಣಮ್ಮನವರ 'ಅನುಗ್ರಹ' ವಾಗಿದೆ. ಅವರ ಸನ್ನಿಧಿಯಲ್ಲಿ ಕುಳಿತು ಭಕ್ತಿಯನ್ನು ಅನುಭವಿಸುವ ಶಿವಸಮಯ ಇವರಿಗೆ ದೊರಕಿದೆ.

ಲೌಕಿಕ ಪಾರಮಾರ್ಥ ಎರಡನ್ನೂ ಮಾಣದೆ ನಡೆಸುವ ಜಾಣರು ಶ್ರೀ ದೇವೆಂದ್ರಪ್ಪನವರು. ಆಚಾರ ಅರಿವುಗಳನ್ನು ಮೈಗೂಡಿಸಿಕೊಂಡ ಪ್ರೀತಿಯ ಮಡದಿ; ತಂದೆಯಂತೆ ಪೂಜ್ಯ ಶರಣಮ್ಮನವರ ಅನುಗ್ರಹ ಪಡೆದ ಮಕ್ಕಳು. ಶ್ರೀ ದೇವೇಂದ್ರಪ್ಪನಂಥವರ ಸಂಸಾರವನ್ನು ಕಂಡೇ ಸರ್ವಜ್ಞ, " ಸ್ವರ್ಗಕ್ಕೆ ಕಿಚ್ಚು ಹಚ್ಚು " ಎಂದಿರಬೇಕು.

**ಡಾ. ಎ. ಶಂಕರ,** ಎಂ.ಬಿ.ಬಿ.ಎಸ್., ರಾಯಚೂರು.

ಮೂವತ್ತೈದು ವರ್ಷಗಳ ಹಿಂದೆ ಡಾ. ಎ. ಅನಂತರಾವ್ ಅವರು ಬೆಂಗಳೂರಿನಿಂದ ರಾಯಚೂರಿಗೆ ಬಂದು ನೆಲಿಸಿದರು; ರಾಯಚೂರಿನ ಆರೋಗ್ಯ ಲೋಕಕ್ಕೆ ಹೊಸ ಜೀವ ಬಂತು ಅವರಿಂದ. ಅವರು ತಮ್ಮ ಸಮರ್ಥ ಚಿಕಿತ್ಸೆಯಿಂದ, ಕುಶಲ ನಿದಾನ ಕಲೆಯಿಂದ ಬಹುಶೀಘ್ರ ಜನಪ್ರಿಯರಾದರು. ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಿಂದ ಅವರ ಜನಪ್ರಿಯತೆ ಇನ್ನೂ ಹೆಚ್ಚಾಯಿತು. ಸತ್ಯ, ನಿಷ್ಠುರತೆ, ಪ್ರಾಮಾಣಿಕತೆ, ದಕ್ಷತೆಗಳಿಗೆ ಹೆಸರಾದವರು ಡಾ. ಅನಂತರಾವ್ ಅವರು. ಅವರ ಪುತ್ರರಾದ ಡಾ. ಶಂಕರರಲ್ಲಿ ಆ ಎಲ್ಲ ಗುಣಗಳು ಬಳುವಳಿಯಾಗಿ ಬಂದಿವೆ.

ರೋಗನಿದಾನದಲ್ಲಿ ಡಾ. ಶಂಕರರದು ಅತ್ಯಂತ ಜಾಣ್ಮೆ ಮತ್ತು ಖಚಿತತೆ, ಚಿಕಿತ್ಸೆಯಲ್ಲಿ ಕುಶಲತೆಯೊಂದಿಗೆ ರೋಗಿಗಳಲ್ಲಿ ಒಲುಮೆಯಿಂದ ವಿಶ್ವಾಸ ಮೂಡಿಸುವ ಕಲೆ ಅವರದೇ.

ಡಾ. ಶಂಕರರು ಸೌಜನ್ಯಶೀಲರು. ಸರಸಸ್ನೇಹಸಜ್ಜನಿಕೆಗೆ ಅವರು ಇನ್ನೊಂದು ಹೆಸರು. ಅವರ ತಂದೆಯಂತೆ ಅವರು ಸಂಗೀತಪ್ರಿಯರು. ಸಾಹಿತ್ಯ ಸಂಗೀತಗಳಿಗೆ ಎಲ್ಲಂದದಿಂದ ನೆರವು ನೀಡುವರು. ಡಾ. ಶಂಕರರು ಸಂಗೀತವನ್ನು ಅರಿತು ಆನಂದಿಸುತ್ತಾರೆ.

ರಾಯಚೂರು ನಗರದ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಅವರು ಅಂತಃಕರಣದಿಂದ ಭಾಗವಹಿಸುತ್ತಾರೆ; ಶ್ರಮಿಸುತ್ತಾರೆ. ಒಂದೆರಡು ವರ್ಷಗಳಲ್ಲಿಯೇ ರಾಯಚೂರಿನ ಸ್ಟೇಶನ್ ರೋಡಿನಲ್ಲಿ ಒಂದು ಸುಂದರ ರಾಮ ಮಂದಿರ ವೈದಾಳಿ ನಿಂತಿತು; ಅದಕ್ಕಾಗಿ ಹಲವರು ಹಲವಂದದಿಂದ ದುಡಿದರು; ಅವರಲ್ಲಿ ಡಾ. ಎ. ಶಂಕರರ ಪಾತ್ರ ಹಿರಿದು. ಅವರು ಆ ರಾಮಮಂದಿರದ ಟ್ರಸ್ಟಿಗಳಲ್ಲಿ ಒಬ್ಬರಾಗಿದ್ದಾರೆ. ಆ ಮಂದಿರದಿಂದ ಬಹುಜನ ಹಿತದ ಧಾರ್ಮಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮ ನಡೆಸುತ್ತಿದ್ದಾರೆ. ಇಲ್ಲಿಯ ಲಾಯಿನ್ಸ್ ಕ್ಲಬ್ಬಿನ ಸದಸ್ಯರಾಗಿದ್ದಾರೆ. ತಾರಾನಾಥ ಶಿಕ್ಷಣ ಸಂಸ್ಥೆಯ ಸದಸ್ಯರಾಗಿ ಬಿ. ಆರ್. ಬಿ. ಕಾಲೇಜಿನ ಕಾರ್ಯಕಾರಿ ಮಂಡಳಿಯ ಕಾರ್ಯದರ್ಶಿಗಳಾಗಿ ಶಿಕ್ಷಣದ ಏಳ್ಗೆಗಾಗಿ ಶ್ರಮಿಸುತ್ತಿದ್ದಾರೆ.

ಡಾ. ಶಂಕರರು ಸ್ನೇಹಜೀವಿಗಳು; ಸರ್ವರನ್ನು ಸಮಭಾವದಿಂದ ಕಾಣುವವರು. ಸುಹೃದಯರಾದ ಅವರ ಗೆಳೆಯರ ಬಳಗ ದೊಡ್ಡದು; ಸುವಿಚಾರಶೀಲ ಬಳಗ ಅದು. ಸಾಯಂಕಾಲ ಅವರ ದವಾಖಾನೆಯ ಮುಂದಿನ ಅಂಗಳದಲ್ಲಿ ಕೂಡುವ ಅವರ ಗೆಳೆಯರ ಬಳಗ ಒಂದು ಮಿನಿ ಪಾರ್ಲಿಮೆಂಟ್ ಇದ್ದಂತೆ ಇರುತ್ತದೆ.

ಡಾ. ಶಂಕರರ ಪ್ರತಿಕಾರ್ಯ ಮಟ್ಟಸತನವುಳ್ಳದು. ಎಲ್ಲದರಲ್ಲಿಯೂ ಶಿಸ್ತು ಬೇಕು ಅವರಿಗೆ. ಹಮ್ಮಿಕೊಂಡ ಕಾರ್ಯ ಮೊದಲಿನಿಂದ ಕೊನೆಯುವರಿಗೆ ಸುಂದರವಾಗಿ ನಡೆಯಬೇಕೆಂಬುದು ಅವರ ಹಂಬಲ; ಅದಕ್ಕಾಗಿ ಪ್ರಾಮಾಣಿಕವಾದ ಅಂತಃಕರಣಪೂರ್ವಕವಾದ ಶ್ರಮ ಅವರದು. ವೈದ್ಯಕೀಯ ವೃತ್ತಿಯವರು ಸಮಾಜವನ್ನು ರಾಷ್ಟ್ರವನ್ನು ಕಟ್ಟುವಲ್ಲಿ ಯಾವ ಗಲಾಟೆಯಿಲ್ಲದೆ ಶ್ರೇಷ್ಠ ಸೇವೆ ಸಲ್ಲಿಸುವರೆಂಬುದಕ್ಕೆ ಡಾ. ಶಂಕರರು ಉತ್ತಮ ನಿದರ್ಶನರಾಗಿದ್ದಾರೆ.

# ಸಂಪಾದಕನ ಮಾತು

## ಗ್ರಂಥ ಸಂಸ್ಕರಣ :

ಸಂಗವಿಭು ಕವಿಯ ನಾಲ್ಕು ಕಾವ್ಯಗಳನ್ನು ಸಂಪಾದಿಸಲು ನಿಶ್ಚಯಿಸಿ ಹಸ್ತಪ್ರತಿಗಳ ಶೋಧ ನಡೆಸಿದೆ. ಕುಮಾರವಿಜಯದ ನಾಲ್ಕು ಪ್ರತಿಗಳು ದೊರಕಿದುವು. ಆದರೆ ಶತಕಗಳ ಪ್ರತಿಗಳು ಹೆಚ್ಚಿಗೆ ದೊರಕಲಿಲ್ಲ.

ಬಸವಶತಕದ ಮೂರು ಪ್ರತಿಗಳು, ಭುವನೈಕನಾಯಕೀ ಶತಕದ ಎರಡು ಪ್ರತಿಗಳು ಮತ್ತು ಪಂಪಾಶತಕದ ಒಂದು ಪ್ರತಿ ನನಗೆ ದೊರಕಿದುವು. ಈ ಪ್ರತಿಗಳಿಂದ ಈ ಮೂರು ಶತಕಗಳನ್ನು ಸಂಪಾದಿಸಲಾಗಿದೆ.

೧. ಶ್ರೀಮಾನ್ ಜೂಕೂರು ಮಲ್ಲನಗೌಡರಿಂದ ದೊರಕಿದ ಪ್ರತಿ : ಇದು ಕೋರಿ ಕಾಗದದ ಪ್ರತಿ. ಸುಮಾರು ೧೦೦-೧೨೦ ವರ್ಷಗಳ ಹಿಂದಿನದೆಂದು ಊಹಿಸಲಾಗಿದೆ. ಇದರಲ್ಲಿ ಸಂಗ ವಿಭುವಿನ ಮೂರು ಶತಕಗಳಲ್ಲದೆ ಸೋಮೇಶ್ವರಶತಕ, ನಿಜಲಿಂಗಶತಕ, ನಿಜಶರಣತ್ರಿವಿಧಿ ಮತ್ತು ಭಜನೆಯ ಪದಗಳು ಇವೆ. ಪ್ರತಿಮಾಡಿದವರ ಹೆಸರಾಗಲೀ ದಿನಾಂಕ ಶಕೆಯಾಗಲೀ ಈ ಪ್ರತಿ ಯಲ್ಲಿಲ್ಲ.

೨. ಶ್ರೀ ಎಂ. ಶಿವಣ್ಣ ಸಂಶೋಧನ ಸಹಾಯಕ ಅವರು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಬಸವಶತಕದ KB 631 ಹಸ್ತಪ್ರತಿಯ ಪಾಠಾಂತರ ಗಳನ್ನು ಗುರುತಿಸಿ ಕಳಿಸಿದ್ದಾರೆ.

೩. ವಿಜಯನಗರದ ನಾಡಗೌಡರ ವಂಶಜರಾದ ಶ್ರೀಮಾನ್ ಜಂಬನಗೌಡರು ಮಾಲಿಪಾಟೀಲ ಹಚ್ಚೊಳ್ಳಿ ಅವರಿಂದ ಭುವನೈಕನಾಯಕೀ ಶತಕ ಮತ್ತು ಬಸವಶತಕಗಳ ಒಂದೊಂದು ಹಸ್ತಪ್ರತಿ ದೊರಕಿದುವು. ಇವು ಬಿಳಿಯ ಕಾಗದದ ಮೇಲೆ ಬರೆದಿದ್ದು ಸುಮಾರು ೪೦-೫೦ ವರ್ಷ ಹಿಂದಿ ನವು ಇರಬಹುದು.

ಬಸವಶತಕವನ್ನು ಮೂರು ಪ್ರತಿಗಳಿಂದ, ಭುವನೈಕನಾಯಕೀಶತಕವನ್ನು ಎರಡು ಪ್ರತಿ ಗಳಿಂದ ಮತ್ತು ಪಂಪಾಶತಕವನ್ನು ಒಂದು ಪ್ರತಿಯಿಂದ—ಸಂಪಾದಿಸಲಾಗಿದೆ. ಶ್ರೀ ಜೂಕೂರು ಮಲ್ಲನಗೌಡರ ಪ್ರತಿಯಲ್ಲಿಯೊಂದೇ ಪಂಪಾಶತಕ ದೊರಕಿತು; ಬೇರೆಕಡೆಗೆ ಎಲ್ಲಿಯೂ ಸಿಕ್ಕಲಿಲ್ಲ. ಆದರೆ ಅದು ಮಲ್ಲನಗೌಡರ ಪ್ರತಿಯಲ್ಲಿ ಉಳಿದೆರಡು ಶತಕಗಳಿಗಿಂತಲೂ ಶುದ್ಧವಾಗಿದೆ; ಸ್ಖಾಲಿತ್ಯ ಹೆಚ್ಚಿಲ್ಲ.

## ಸಂಕೇತಗಳು :

ಶ್ರೀ ಜೂಕೂರು ಮಲ್ಲನಗೌಡರ ಪ್ರತಿಯನ್ನು 'ಮ' ಎಂದು ಕರೆಯಲಾಗಿದೆ.

ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ KB 631 ಹಸ್ತಪ್ರತಿ ಯನ್ನು 'ಶಿ' ಎಂದು ಕರೆಯಲಾಗಿದೆ.

ಶ್ರೀ ಜಂಬನಗೌಡರ ಪ್ರತಿಯನ್ನು 'ಜ' ಎಂದು ಕರೆಯಲಾಗಿದೆ.

[ ] ನಾನು ಊಹಿಸಿದುದಕ್ಕೆ ಸಂಕೇತ ಈ ಕಂಸ. ಈ ಕಂಸದೊಂದಿಗೆ ಸಂಖ್ಯೆಗಳನ್ನು ಉಪಯೋಗಿಸಿರುವಲ್ಲಿ ನನ್ನ ಊಹೆ ಇಲ್ಲಿ ಕೊಟ್ಟು ಅಡಿ ಟಿಪ್ಪಣಿಯಲ್ಲಿ ಮೂಲ ಪಾಠವನ್ನು

ಕೊಡಲಾಗಿದೆ. ಎಲ್ಲ ಪ್ರತಿಗಳ ಪಾಠಗಳು ಸರಿಯಾಗಿಲ್ಲವೆಂಬು ನನಗೆನಿಸಿದ ಕಡೆಗೆ ಇದನ್ನು ಬಳಸಿದ್ದೇನೆ.

## ಕವಿಯ ಭಾವ ಚಿತ್ರ:

ಗಣೇಕಲ್ ನಾಡಗೌಡರ ಮನೆಯಲ್ಲಿ ಕೈಯಿಂದ ಬರೆದ ಎರಡು ವರ್ಣ ಭಾವಚಿತ್ರಗಳು ದೊರಕಿದುವು. ಒಂದು ಚಿತ್ರದ ಕೆಳಗೆ "ಸರ್ ಸಿದ್ಧಲಿಂಗಪ್ಪ" ಎಂದು ಬರೆದಿದೆ. ಈತ ಕವಿಯ ಹೆಂಡತಿಯ ಅಣ್ಣ. ಇನ್ನೊಂದು ಚಿತ್ರ ಕವಿ ಸಂಗವಿಭುವಿನದು. ಇದರ ಕೆಳಗೆ ಹೆಸರು ಇದ್ದಿಲ್ಲ. ಇದು ಸಂಗವಿಭುವಿನದೇ ಎಂದು ಆತನ ವಂಶಜರು ಹೇಳಿದರು. ತಾತ ಮುತ್ತಾತರಿಂದ ಅವರು ಇದನ್ನು ಅರಿತಿದ್ದಾರೆ.

ಇವೆರಡು ಭಾವ ಚಿತ್ರಗಳು ಮೊಗಲ್-ಡೆಕ್ಕನ್ ಆರ್ಟ್‌ಶೈಲಿಯಲ್ಲಿವೆ. ಆ ಕಾಲಕ್ಕೆ ಈ ಶೈಲಿ ಬಳಕೆಯಲ್ಲಿತ್ತು. ಇದಕ್ಕೆ ಪೋಷಕವಾಗಿ ಈ ಭಾಗದ ಮಠಗಳಲ್ಲಿ, ಜಹಗೀರದಾರರು ಮತ್ತು ದೇಸಾಯರ ಮನೆಗಳಲ್ಲಿ ಈ ಶೈಲಿಯ ಚಿತ್ರಗಳು ದೊರಕುತ್ತವೆ.

ಈ ವರ್ಣಚಿತ್ರಗಳನ್ನು ಚಿತ್ರಿಸಿದ ಚಿತ್ರಕಾರನು ಯಾರೋ ತಿಳಿದು ಬಂದಿಲ್ಲ. ಕವಿಯ ಚಿತ್ರವನ್ನು ಮಾತ್ರ ವರ್ಣದಲ್ಲಿ ಅಚ್ಚು ಮಾಡಲಾಗಿದೆ. ಆತನ ಭಾವಮೈದುನ ಸಿದ್ಧಲಿಂಗಪ್ಪನ ಚಿತ್ರ ಕಪ್ಪು-ಬಿಳುಪಿನಲ್ಲಿ ಅಚ್ಚಿಸಲಾಗಿದೆ. ಕವಿಯ ಮುಂದೆ ಕುಳಿತಿರುವವನು ಆತನ ಆತ್ಮೀಯ ಗೆಳೆಯ ಅಕ್ಕಸಾಲಿಗ.

## ನಮನ :

ಸಂಗವಿಭುವಿನ ಕಾವ್ಯಗಳನ್ನು ಸಂಪಾದಿಸಲು ನನಗೆ ಮೊದಲಿಗೆ ಪ್ರಚೋದನೆಯಿತ್ತವರು ಡಾ॥ ಕೆ. ಮುದ್ದಣ್ಣನವರು. ಅದರ ಫಲವೇ ನನ್ನ ಈ ಸಾಹಿತ್ಯ ಸಂಶೋಧನೆ ಮತ್ತು ಸಂಪಾದನೆ. ಡಾ॥ ಕೆ. ಮುದ್ದಣ್ಣನವರು ನನಗೆ ಈ ಸಂಪಾದನ ಕಾರ್ಯದಲ್ಲಿ ತೊಂದರೆಯಾದಾಗಲೆಲ್ಲ ತುಂಬು ಮನಸ್ಸಿನಿಂದ ಧನದಿಂದ ನೆರವಿತ್ತಿದ್ದಾರೆ. ಅವರನ್ನು ಎಷ್ಟು ಸ್ಮರಿಸಿದರೂ ಸಾಲದು.

ಶತಕದ ಪ್ರತಿಗಳನ್ನು ಪ್ರೀತಿ ವಿಶ್ವಾಸಗಳಿಂದ ನನಗಿತ್ತ ಶ್ರೀ ಜೂಕೂರು ಮಲ್ಲನಗೌಡರಿಗೂ ಶ್ರೀ ಹರ್ವಿ ಮಾಲಿಪಾಟೀಲ ಜಂಬನಗೌಡರಿಗೂ ನಾನು ಋಣಿ.

ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯ KB 631 ಹಸ್ತಪ್ರತಿಯ ಪಾಠಾಂತರಗಳನ್ನು ಗುರುತಿಸಿ ಕಳಿಸಿದ ಶ್ರೀ ಎಂ. ಶಿವಣ್ಣ ಸಂಶೋಧನ ಸಹಾಯಕ ಬೆಂಗಳೂರು ವಿಶ್ವವಿದ್ಯಾಲಯ ಅವರನ್ನು ಸ್ಮರಿಸದಿರಲಾರೆ.

ಕವಿ ಸಂಗವಿಭುವಿನ ಸಮಕಾಲೀನ ಜನಜೀವನದ ಕೆಲವು ಘಟನೆಗಳನ್ನು ಬರೆದು ತಿಳಿಸಿದ ಶ್ರೀ ಸತ್ಯಂಪೇಟೆ ಲಿಂಗಣ್ಣ ಮತ್ತು ಶ್ರೀ ಶಂಕರ ಶಾಸ್ತ್ರಿಗಳು ಸುರಪುರ ಅವರಿಗೆ ನಾನು ತುಂಬ ಋಣಿ.

ಕವಿಯ ವಂಶಜರಾದ ಶ್ರೀ ಚೆನ್ನವೀರಪ್ಪ ನಾಡಗೌಡರು ಫಾರಸೀ ಕಾಗದ ಪತ್ರಗಳನ್ನು, ಕವಿಯ ಭಾವಚಿತ್ರವನ್ನು ಮತ್ತು ಕುಮಾರ ವಿಜಯದ ಎರಡು ಪ್ರತಿಗಳನ್ನು ಒದಗಿಸಿದ್ದಾರೆ. ಶ್ರೀ ಮಾಯಪ್ಪಗೌಡರು ಸಂಸ್ಥಾನಕ್ಕೆ ಸಂಬಂಧಿಸಿದ ಮಹತ್ವದ ಕಾಗದ ಪತ್ರಗಳನ್ನು ಕೊಟ್ಟಿದ್ದಾರೆ. ಶ್ರೀ ಚೆನ್ನಣ್ಣ ನಾಡಗೌಡರು, ಲಿಂ. ಸಂಗಪ್ಪ ನಾಡಗೌಡರು ಸಂಸ್ಥಾನದ ಬಗ್ಗೆ, ಕವಿಯ ಬಗ್ಗೆ ಅನೇಕ ಮಾಹಿತಿಗಳನ್ನು ಒದಗಿಸಿದ್ದಾರೆ. ಇವರೆಲ್ಲರಿಗೆ ನನ್ನ ಕೃತಜ್ಞತೆಗಳು.

ಕನ್ನಡ ಸಾಹಿತ್ಯವನ್ನು ಆಳವಾಗಿ ಅಭ್ಯಾಸಮಾಡಿದ, ಚಿತ್ರಕಲಾವಿದರಾದ ಅರುವಲಿಯ ಪ್ರೋ॥ ಪಾ॥ ಶ್ರೀ ಬಸವರಾಜಪ್ಪ ಮಾಸ್ತರರು ತಮ್ಮಲ್ಲಿದ್ದ ಕುಮಾರವಿಜಯದ ಒಂದು ಪ್ರತಿಯನ್ನು ಕೊಟ್ಟಿದ್ದಾರೆ. ಅವರಿಗೆ ನನ್ನ ನೆನಕೆಗಳು.

ಸಂಪಾದನೆಯ ಕಾರ್ಯದಲ್ಲಿ ನೆರವಿತ್ತ ಶ್ರೀ ಚೆನ್ನಬಸವಪ್ಪ ವಕೀಲ ಬೆಟ್ಟದೂರು ಮತ್ತು ಶ್ರೀ ವಿರಣ್ಣಗೌಡ ನೀರಮಾನ್ವಿ ಇವರನ್ನು ನಾನು ನೆನೆಯದೆ ಇರಲಾರೆ.

ಈ ಮೊದಲು ಬಸವಶತಕ ಪ್ರಕಟವಾದಾಗ, ಅದನ್ನೋದಿ ತುಂಬು ಹೃದಯದಿಂದ ಅಭಿಪ್ರಾಯವನ್ನು ಆಶೀರ್ವದಿಸಿದ ಮಹಾಕವಿ ಡಾ. ದ. ರಾ. ಬೇಂದ್ರೆಯವರಿಗೆ ನನ್ನ ಅಂತಃಕರಣದ ಪ್ರಣಾಮಗಳು.

ಈ ಗ್ರಂಥ ಹೊರಬರಲು ಕಾರಣರಾದ ಮಹಾದಾನಿ ಶ್ರೀ ಸೋಮಾ ರಾಮನಗೌಡರು ಮತ್ತು ಮಹಾಪೋಷಕರಾಗಿ ಪ್ರೋತ್ಸಾಹಿಸಿದ ಶ್ರೀ ಶಿವರಾಜ ಪಾಟೀಲ, ಡಾ. ಅಮರಖೇಡ, ಶ್ರೀ ದೇವೇಂದ್ರಪ್ಪ ಮತ್ತು ಡಾ. ಎ. ಶಂಕರರ ಉಪಕಾರ ನಾನು ಹೇಗೆ ಮರೆಯಲಿ ? ಅವರಿಗೆ ಮೌನದಿಂದ ಮಣಿಯುವೆ.

ನನ್ನ ಕಾರ್ಯದಲ್ಲಿ ಅನೇಕವಿಧವಾಗಿ ಶ್ರೀ ತಿಮ್ಮಯ್ಯ ಕಲ್ಲೂರು, ಶ್ರೀ ಶಂಕರಗೌಡ ಬೆಟ್ಟದೂರು ಮತ್ತು ಶ್ರೀ ಖಾಜಾ ಹುಸೇನ ನೆರವಿತಿದ್ದಾರೆ. ಅವರನ್ನು ತುಂಬು ಹೃದಯದಿಂದ ನೆನೆವೆ.

ಬಹು ಸುಂದರವಾಗಿ ಗ್ರಂಥವನ್ನು ಅಚ್ಚುಮಾಡಿಕೊಟ್ಟ ಮತ್ತು ಹಲವು ಹತ್ತುವಿಧವಾಗಿ ನೆರವಿತ್ತ ಜನತಾ ಪ್ರಿಂಟರಿಯ ಒಡೆಯರಾದ ಶ್ರೀ ಪಿ. ಬಸಣ್ಣನವರಿಗೆ ನನ್ನ ಅಂತಃಕರಣದ ಕೃತಜ್ಞತೆಗಳು.

ರಾಯಚೂರು
ಅಕ್ಟೋಬರ್ ೧೯೭೩

— ಸಂಪಾದಕ

# ಸಂಗವಿಭು ಕವಿಯ ಬಸವಶತಕವನ್ನು ಕುರಿತು*

ರಾಯಚೂರಿನ ಖ್ಯಾತ ಸಾಹಿತಿ ಶಾಂತರಸರಿಂದ ಸಂಪಾದಿತವಾಗಿ ಶ್ರೀ ಮುರುಘಾಮಠ, ಧಾರವಾಡ ಇವರಿಂದ ಪ್ರಕಾಶಿತವಾದ ಬಸವ ಶತಕವು ಬಸವಸಾಹಿತ್ಯಕ್ಕೆ ಬೆಲೆಯುಳ್ಳ ಕೊಡುಗೆ.

'ಶತಕ' ಸಾಹಿತ್ಯವು ಕ್ರಿ. ಶ. ೧೯ ನೆಯ ಶತಮಾನದಲ್ಲಿ ಒಬ್ಬ ಚಂಪೂಕಾರನ ಕೃಪಾದೃಷ್ಟಿಗೆ ಪಾತ್ರವಾಗಿದ್ದುದು ಕನ್ನಡ ಸಾಹಿತ್ಯ ಸಂಸ್ಕೃತಿಯ ಜೀವಂತಿಕೆಯ ಕುರುಹು. ಬೆಳಕಿಗೆ ಬಾರದ ಇನ್ನೂ ಹಲವಾರು ಕೃತಿಗಳು ಪ್ರಕಾಶಗೊಂಡಾಗ ಈ ಪುಷ್ಟಿಯ ವೀರ್ಯವತ್ತರತೆಗೆ ಹೊಸ ಅರ್ಥ ಮೂಡುತ್ತದೆ.

ಶಾಂತರಸರ ಸಂಪಾದನ ಕೌಶಲ್ಯವು ಯಾವಂಗವನ್ನೂ ಅರಕಳಿ ಮಾಡಿಲ್ಲ. ನಿರೂಪಣೆಯ ಶೈಲಿಯು ಸಹೃದಯತಾ ಸಂಪನ್ನವಾಗಿದ್ದುದು ಅವರ ಕವಿತ್ವಕ್ಕೆ ಉಚಿತವೇ ಆಗಿದೆ.

ಸಂಗವಿಭುವಿನ ಕುಮಾರವಿಜಯವು ಕನ್ನಡ ಪ್ರತಿಭೆಯ ನೂತನಾವಿಷ್ಕಾರವೆಂದು ಪ್ರಕಟವಾದಾಗ ರಸಿಕರು ಮೆಚ್ಚುವರೆಂಬಲ್ಲಿ ಯಾವ ಸಂಶಯವೂ ಇಲ್ಲ.

ಶಾಂತರಸರ ಪಾಂಡಿತ್ಯ ಪರಿಶ್ರಮವೂ ಅವರ ಕವಿತ್ವದಂತೆ ಗೌರವವನ್ನು ಪಡೆಯಲೆಂದು ನಾನು ಹಾರೈಸುತ್ತೇನೆ.

— ಡಾ. ದ. ರಾ. ಬೇಂದ್ರೆ

---

* ೧೯೬೮ ರಲ್ಲಿ ಪ್ರಕಟವಾದಾಗ ಬರೆದು ಕಳಿಸಿದ ಅಭಿಪ್ರಾಯವಿದು.

# ಪ್ರಸ್ತಾವನೆ

## ಕವಿ — ದೇಶ — ಕಾಲ

ಕವಿ ಸಂಗವಿಭು ತನ್ನ ಹುಟ್ಟಿದೂರನ್ನು ಹೇಳಿಕೊಂಡಿಲ್ಲ. ಇದರಂತೆ ತಾನು ಬದುಕಿದ ಅಥವಾ ಕಾವ್ಯರಚನೆ ಮಾಡಿದ ಕಾಲವನ್ನೂ ಸೂಚಿಸಿಲ್ಲ. ತನ್ನದು "ನಲ್ಲಂಗಿ ವಂಶ. ತಂದೆ ಗೌಡಪ್ಪವಿಭು, ತಾಯಿ ರಾಮಾಂಬಾ ರಾಜಕನ್ಯಾಮಣಿ" ಎಂದು ಇಷ್ಟನ್ನೇ ತನ್ನ ಕಾವ್ಯಗಳಲ್ಲಿ ಹೇಳಿಕೊಂಡಿದ್ದಾನೆ. "ಆತನ ಹುಟ್ಟಿದೂರು ಆದವಾನಿ ತಾಲೂಕಿಗೆ ಸೇರಿದ ನಂದವಾರ. ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿಗೆ ಸೇರಿದ ಗಣೇಕಲ್ಲಿನ ನಾಡಗೌಡರ ಮನೆತನದ ಹೆಣ್ಣನ್ನು ಆತ ಮಾಡಿಕೊಂಡಿದ್ದ. ತನ್ನ ಜೀವಿತದ ಬಹುಕಾಲವನ್ನು ತನ್ನ ಮಾವನ ಮನೆಯಲ್ಲಿಯೇ ಕಳೆದ. ಆತನ ಭಾವಮೈದುನ ಸಿದ್ಧಲಿಂಗಪ್ಪ ಸಂಸ್ಥಾನದ ಕಾರಭಾರನ್ನು ಈತನಿಗೇ ಒಪ್ಪಿಸಿದ್ದ. ಇಲ್ಲಿಯೇ ಈತ ಕಾವ್ಯಗಳನ್ನು ರಚಿಸಿದ" ಎಂಬುದು ಈಗ ಗಣೇಕಲ್ಲಿನಲ್ಲಿರುವ ಸಿದ್ಧಲಿಂಗಪ್ಪನ ವಂಶಸ್ಥರಾದ ನಾಡಗೌಡರಿಂದ ತಿಳಿದು ಬರುತ್ತದೆ. ಇಲ್ಲಿಯೇ ಈ ಕವಿಯು ಕಾವ್ಯಗಳನ್ನು ಬರೆದನೆನ್ನುವುದಕ್ಕೆ ಪ್ರಬಲವಾದ ಬಾಹ್ಯ ಪ್ರಮಾಣಗಳು ಸಿಕ್ಕುತ್ತವೆ.

ರಾಯಚೂರು ಜಿಲ್ಲೆಯಲ್ಲಿ ಅದೂ ಹೆಚ್ಚಾಗಿ ದೇವದುರ್ಗ, ಮಾನ್ವಿ, ಸಿಂಧನೂರು ಮತ್ತು ರಾಯಚೂರು ತಾಲೂಕಗಳಲ್ಲಿ ಈ ಕವಿಯ ಕಾವ್ಯದ ಹಸ್ತಪ್ರತಿಗಳು ದೊರೆಯುತ್ತವೆ. ಇಂದಿಗೂ ಇಲ್ಲಿಯ ಜನಗಳಿಗೆ ಈತನ ಕಾವ್ಯಗಳೆಂದರೆ ಬಲು ಪ್ರೀತಿ. ಮಾನ್ವಿ ತಾಲೂಕಿಗೆ ಸೇರಿದ ಕುರುಡಿ ಮತ್ತು ಕಲ್ಲೂರು ಗ್ರಾಮಗಳ ಪಂಡಿತರಲ್ಲಿ ಈ ಕವಿಯ ಕಾವ್ಯಗಳ ಬಗ್ಗೆ ಚರ್ಚೆ ನಡೆಯುತ್ತಿತ್ತು. ಮೂವತ್ತು ವರ್ಷಗಳ ಹಿಂದೆ ಈ ಚರ್ಚೆ ಜೀವಂತವಾಗಿತ್ತು. ಈಗ ಆ ಪಂಡಿತರು ಉಳಿದಿಲ್ಲ. ಅವರು ಕುಮಾರವಿಜಯದ ಪದ್ಯಗಳಿಗೆ ಅನೇಕ ಅರ್ಥಗಳನ್ನು ಹೇಳುತ್ತಿದ್ದರಂತೆ. ಆ ಕಾವ್ಯದ ಅರ್ಥವನ್ನೂ ಸೊಗಸನ್ನೂ ಕುರುಡಿಯ ಕೃಷ್ಣಾಚಾರ್ಯ ಎಂಬವರು ಮನಂಬುಗುವಂತೆ ಹೇಳುತ್ತಿದ್ದರಂತೆ. ಲಿಂ. ಹೊಳೆಬಳ್ಳಾರಿ ಮಲ್ಲನಗೌಡರು, ನನ್ನ ಗುರುಗಳಾದ ಲಿಂ. ಪಂ. ಸೂಗವೀರಶರ್ಮರು ಸಂಗವಿಭು ಕವಿಯ ಕಾವ್ಯಗಳ ಸ್ವಾರಸ್ಯವನ್ನೂ ಹಿರಿಮೆಯನ್ನೂ ಬಲ್ಲವರಾಗಿದ್ದರು; ಅವರ ಮುಖದಿಂದ ಕೇಳಿ ನಾನು ಸಂತೋಷಪಟ್ಟಿದ್ದೇನೆ. ಈ ಕಾವ್ಯಗಳನ್ನು ಅರ್ಥೈಸಿ, ರಸಧ್ವನಿಗಳನ್ನು ಹೇಳುವವರು ಈಗಲೂ ಇದ್ದಾರೆ. ಅವರು: ಬೇಗವಾಟದ ಚೆನ್ನಬಸವ ಶಾಸ್ತ್ರಿಗಳು,

ಜೂಕೂರು ಮಲ್ಲನಗೌಡರು, ಬೇಗವಾಟದ ಮಾಲೀಪಾಟೀಲ ಅಮರೇಗೌಡರು ಮತ್ತು ವೆಂಕಟಪುರದ ಪಂಪಣ್ಣನವರು.

ಸಂಗವಿಭುವಿನ ಜೀವನಕ್ಕೆ ಸಂಬಂಧಿಸಿದ ಅನೇಕ ಕಥಾಸಂಗತಿಗಳು ಈ ಭಾಗದಲ್ಲಿ ಇನ್ನೂ ಪ್ರಚಾರದಲ್ಲಿವೆ. ಅವುಗಳನ್ನು ಹೇಳಿಕೊಂಡು ಜನರು ಇಂದಿಗೂ ಸಂತೋಷಪಡುತ್ತಾರೆ. ಇಂಥ ಅನೇಕ ಕಥಾ ಸಂಗತಿಗಳನ್ನು ಲಿಂ. ನನ್ನ ಪೂಜ್ಯ ತಂದೆಯವರು ಚಿಕ್ಕಂದಿನಲ್ಲಿ ನನಗೆ ಹೇಳುತ್ತಿದ್ದರು. ಹಳ್ಳಿಗಳಲ್ಲಿ ಯಾರಾದರೂ ಕವನ ಕಟ್ಟಿದರೆ "ಸಂಗಪ್ಪಧಣಿಯ (ಜನರ ಪ್ರೀತಿಯ ಹೆಸರು) ಮಾತಿನಲ್ಲಿ ಹೇಳಬೇಕೆಂದರೆ........" ಎಂದು ಪ್ರಾರಂಭಿಸುತ್ತಿದ್ದರು ಜನ. ಆ ಮಾತು ಇಂದಿಗೂ ಜೀವಂತವಾಗಿದೆ. ಅದರ ವಿಷಯ ಹೀಗಿದೆ: ಸಂಗವಿಭು ಬದುಕಿದ್ದಾಗ ಅನೇಕರು ಕವನ, ಪದ ಹೊಸೆದುಕೊಂಡು ಆತನಲ್ಲಿಗೆ ಹೋಗಿ ಓದುತ್ತಿದ್ದರಂತೆ. ಆತನಿಂದ 'ಶಹಬಾಷ್‌ಗಿರಿ' ಪಡೆಯಬೇಕೆಂಬುದು ಅವರ ಹಂಬಲ. ಆದರೆ ಯಾರೂ ಆತನಿಂದ ಮೆಚ್ಚುಗೆ ಪಡೆಯಲಿಲ್ಲ. ಆತ ಹಾಗೆ ಬಂದವರೆಲ್ಲರಿಗೂ "ನಿಮ್ಮ ಪದ ನೀಲಗಲ್ಲು ದಾಸರಿಗಿಂತಲೂ ಸ್ವಲ್ಪ ಜೇಷಿದೆ" ಎನ್ನುತ್ತಿದ್ದನಂತೆ. ಆ ಕಾಲಕ್ಕೆ ನೀಲಗಲ್ಲಿನ ದಾಸರು ಅನೇಕ ಹಾಡುಗಳನ್ನು ಕಟ್ಟುತ್ತಿದ್ದರು. ಅವರೂ ಸಂಗಪ್ಪನ ಮೆಚ್ಚುಗೆ ಗಳಿಸಬೇಕೆಂಬವರ ಸಾಲಿನಲ್ಲಿ ಸೇರಿದವರೇ. ಆದರೆ ಅವರಿಗೆ ಸಿಕ್ಕುತ್ತಿದ್ದುದು ಬೈಗಳು. ನೀಲಗಲ್ಲು ಗಣೇಕಲ್ಲಿನ ಸಮೀಪದಲ್ಲಿದೆ.

ಕವಿ ಸಂಗವಿಭುವಿನ ಊರೆಂದು ಹೇಳುವ ನಂದವಾರದಲ್ಲಿ ಈಗ ಆತನ ವಂಶಜರಾರೂ ಇಲ್ಲ. ಅಲ್ಲಿ ಆತನ ಕಾವ್ಯದ ಪ್ರತಿಗಳೂ ಸಿಕ್ಕುವುದಿಲ್ಲ. ಅಲ್ಲಿಯ ಜನಗಳಿಗೆ ಈ ಕಾವ್ಯಗಳ ಹೆಸರುಗಳೂ ಗೊತ್ತಿಲ್ಲ. ಇದರಿಂದ ಸಂಗವಿಭು ರಾಯಚೂರು ಜಿಲ್ಲೆಯಲ್ಲಿ – ಗಣೇಕಲ್ಲಿನಲ್ಲಿ – ಇದ್ದುಕೊಂಡು ಕಾವ್ಯಗಳನ್ನು ರಚನೆಮಾಡಿದನು ಎನ್ನುವ ಮಾತಿಗೆ ಪುಷ್ಟಿ ದೊರೆಯುತ್ತದೆ.

ಕವಿಯ ಕಾಲ ದೇಶಗಳನ್ನು ಕುರಿತು ಕೆಲವು ಆಂತರಿಕ ಮತ್ತು ಬಾಹ್ಯ ಪ್ರಮಾಣಗಳು ದೊರಕುತ್ತವೆ.

ಕವಿಯು ತನ್ನ ಕುಮಾರವಿಜಯದಲ್ಲಿ ಸಂಸ್ಕೃತ ಶೈವ ಕವಿಗಳನ್ನು, ಕನ್ನಡದ ವೀರಶೈವ ಕವಿಗಳನ್ನು ಸ್ತುತಿಸುತ್ತಾನೆ. ಕನ್ನಡ ಕವಿಗಳಲ್ಲಿ ಹರಿಹರ, ರಾಘವಾಂಕ, ಭೀಮಕವಿ, ಸೋಮಕವಿ, ಪದ್ಮರಸ, ಷಡಕ್ಷರದೇವ ಇವರನ್ನು ಭಕ್ತಿಯಿಂದ ನೆನೆಯುತ್ತಾನೆ. ಷಡಕ್ಷರದೇವನಿಂದ ಎಂದರೆ ಕ್ರಿ. ಶ. ೧೬೫೫ ರಿಂದ ಸಂಗವಿಭು ಈಚಿನವನೆಂಬುದು ಸ್ಪಷ್ಟವಾಯಿತು. ಇದೊಂದನ್ನುಳಿದರೆ ಆತನ ಕಾಲನಿರ್ಣಯಕ್ಕೆ ಅಂತರಿಕ ಪ್ರಮಾಣ ಬೇರೇನೂ ಇಲ್ಲ.

ಬಾಹ್ಯಪ್ರಮಾಣಗಳು ಬಹಳ ಪ್ರಬಲವಾಗಿವೆ: 'ಗಣೇಕಲ್ಲಿನ ದೊರೆ ಸಿದ್ಧಲಿಂಗಪ್ಪ ತನ್ನ ಭಾವನಾದ ಸಂಗಪ್ಪನಿಗೆ ರಾಜ್ಯದ ಕಾರಭಾರವನ್ನು ವಹಿಸಿದ್ದನು,

ಮತ್ತು ಸಂಗಪ್ಪನಿಗೆ ಸಿದ್ಧಲಿಂಗಪ್ಪನ ಅಕ್ಕ ಸಿದ್ಧಮ್ಮನನ್ನು ಕೊಟ್ಟಿತ್ತು' ಎಂಬ ವಿಷಯ ಇಂದಿಗೂ ಇರುವ ಅವರ ಮನೆತನದವರು ಹೇಳುತ್ತಾರೆ. ಆದರೆ ಇದಕ್ಕೆ ಲಿಖಿತ ಯಾವ ಆಧಾರವೂ ಇಲ್ಲ. ಸಂಗವಿಭು ಗಣೇಕಲ್ ಸಂಸ್ಥಾನದ ರಾಜ್ಯಭಾರ ಮಾಡಿದನೆಂಬುದಕ್ಕೆ ಆ ಮನೆತನದ ಯಾವ ಕಾಗದ ಪತ್ರಗಳಲ್ಲಿಯೂ ದಾಖಲೆ ಇಲ್ಲ.

ಹೀಗಿದ್ದರೂ ಈ ಸಂಗತಿಯನ್ನು ನಂಬಲಡ್ಡಿಯಿಲ್ಲ. ಪಟ್ಟೇದಾರ ದೊರೆ ಸಿದ್ಧಲಿಂಗಪ್ಪ ಎಂಬುದು ಆಗ ಯಾರಿಗೂ ಗೊತ್ತಿರಲಿಲ್ಲ. ಈಗಲೂ ಗೊತ್ತಿಲ್ಲ. ಗಣೇಕಲ್ ದೊರೆ ಎಂದರೆ ಸಂಗಪ್ಪ (ಸಂಗವಿಭು) ಎಂದೇ ಅವರ ನಂಬುಗೆಯಾಗಿತ್ತು. ಏಕೆಂದರೆ ನೇರವಾದ ಆಡಳಿತಗಾರ ಈತನೇ ಆಗಿದ್ದು, ಈ ವಿಷಯ ಬಾಯಿಂದ ಬಾಯಿಗೆ ಬಂದು ಈತನೇ ದೊರೆಯಾಗಿದ್ದನೆಂಬುದು ಜನರಲ್ಲಿ ಉಳಿದು ಬಿಟ್ಟಿತು.

ಸಿದ್ಧಲಿಂಗಪ್ಪ ದೊರೆಯಾಗಿದ್ದ ಕಾಲದ ಎರಡೇ ಕಾಗದ ಪತ್ರಗಳು ದೊರಕಿವೆ. ಒಂದು ಶಾ. ಶ. ೧೭೪೯ರದು; ಇನ್ನೊಂದು ಶಾ. ಶ. ೧೭೫೧ರದು. ಇವೆರಡೂ ಇನಾಮತಿ ಹೊಲಕ್ಕೆ ಸಂಬಂಧಿಸಿದುವು.

ಗಣೇಕಲ್ ಸಂಸ್ಥಾನದ ಕಾಗದ ಪತ್ರಗಳಲ್ಲಿ 'ನಂದವಾರ ಸಂಗಪ್ಪ' ಎಂಬಾತನ ಹೆಸರಿನಲ್ಲಿ ಎರಡು ಪತ್ರಗಳು ಸಿಕ್ಕಿವೆ. ಒಂದು ಶಾ. ಶ. ೧೭೫೩ರದು; ಇನ್ನೊಂದು ಶಾ. ಶ. ೧೭೬೧ರದು. ಇವೆರಡೂ ಕಾಗದಗಳು ಬಹಳ ಮಹತ್ವದವು. ಮತ್ತು ಕವಿಯ ಕಾಲ ಮತ್ತು ಊರಿನ ಬಗ್ಗೆ ಒಂದು ನಿಶ್ಚಿತ ಅಭಿಪ್ರಾಯಕ್ಕೆ ಬರಲು ತುಂಬ ಸಹಕಾರಿಯಾಗಿವೆ.

ಶಾ. ಶ. ೧೭೫೩ ರ ಪತ್ರ ಹಿಗಿದೆ:

ಶ್ರೀ

ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಷ ೧೭೫೩ ನೆಯ ವಿಕೃತಿ ನಾಮ ಸಂ। ಚೈತ್ರ ಶು। ೯ ಗುರುವಾರದಲ್ಲಿ ರಾ॥ ನಂದವಾರ ಸಂಗಪ್ಪ ನವರಿಗೆ ಕ॥ ಕಿಲೆ ರಾಯಚೂರು ಗೌಡ ಕು॥ ಗಳು ಬರೆದುಕೊಟ್ಟ ಪತ್ರ ಸನ್ನು ೧೨೪೧ ಫಸಲಿ ಈಗ ನಮ್ಮ ಕಸಬೆದೊಳಗೆ ಪೂರ್ವದಲ್ಲಿ ರಾ॥ ನಾಡಗೌಡ ತಂಗಮ್ಮನವರ ಯಿನಾಮತಿ ಇದ್ದದ್ದು ಅದು ಪಾಕ(ಪ)ಬಿದ್ದು ಯಿರಲಾಗಿ ನಿಮ್ಮ ಹಿರೇರ ಮಿರಾಸಿ ನಿಮಗೆ ಕೊಟ್ಟು ಹೀವಿ, ಭಾವಿ ಹಾಸನು ಮಾಡಿ ಕಟ್ಟಿ ಕೊಂಡು ತೋಟ ಮಾಡ್ಸಿ ಕೊಟ್ಟು ನಿಮ್ಮ ಪುತ್ರ ಪೌತ್ರ ಪಾರಂಪರ ಆಚಂದ್ರಾರ್ಕಸ್ತಾಯಿಗಳಿಗಿ ಅನುಭವ ಮಾಡಿಕೊಂಡು ಸುಖದಲ್ಲಿ ಯಿರ್ರಿ ನಿರ್ವಿವಾದ ನಡ್ಸಿ ಕೊಳ್ತಿವಿ ಯಿದ್ಕಾರಾರಾದರು ಅನಿಥ ಮಾಡಿವರೆ ತಮ್ಮ ಗುರು ಹಿರೇರ ದ್ರೋಹ ಮಾಡಿದ ಹಾಗೆ ಯಿದ್ಕ ಹಾದು (ಹದ್ದು) ಮಾಡಿಪದು

೧ ಪೂರ್ವಕ್ಕೆ ಝರೆ ಬೆಟ್ಟದ ಹಿರೆ ಮಾರ್ಗ
೧ ಪಶ್ಚಿಮಕ್ಕೆ ಸಣ್ಣ ಮಾರ್ಗವು ತಗಲುವದು

೧ ದಕ್ಷಿಣಕ್ಕೆ ಟಿಪಂಕಿ ಸುಲಾತಾನ ಸಾ। ಯಿನಾಮತಿ

೧ ಉತ್ತರಕ್ಕೆ ಯರಡುಮಾರ್ಗ ಕೂಡಿಲಿದೆ

ಯಿವಿಧವಲ್ಲಿ ನೇಮಿಸಿಕೊಟ್ಟು ಯಿದ್ದೆವು ಹೀಗೆಂದು ಬರದುಕೊಟ್ಟ ಪತ್ರ ಸಹಿ

ತಾ। ಚ ೭ ಮಾಹೆ ಶವಾಲು ಸನ್ನು ೧೨೪೫ ಹಿಜರಿ

ಬಿ॥ ವಾಸುದೇವ ಭೀಮಶ್ಯನಗೌ ॥ ಕ ॥

ದ॥ ಗೌಡರು ದ॥ ಕ॥ ರಾಮ್ಮ್ಯಾಯ್ಯ ದ॥ ಕ॥ ರಾಘೈ

ದ॥ ಕ॥ ಶೀನಯಾ

ಶಾ. ಶ. ೧೭೬೧ ರ ಪತ್ರ ಹೀಗಿದೆ :

ಶ್ರೀ

ಸ್ವಸ್ತಿ ಶ್ರೀನೃಪ ಶಾಲಿವಾಹನ ಶಖ ೧೭೬೧ ವಿಕಾರಿನಾಮ ಸಂ। ರದ ಕಾರ್ತಿಕ ಸು॥ ೧೪ ಬುಧವಾರದಲ್ಲು ಮಹಾ ರಾ॥ ರಾ॥ ಸಂಗಪ್ಪ ನಂದವಾರ ಸಾ॥ ನಾಡಗೌಡ ದ॥ ಸರಕಾರ ರಾಯಚೂರುಗಳವರಿಗೆ—

ಕ॥ ಗುಂಜಿಹಳ್ಳಿ ಗೌಡ ಕು॥ ಗಳು ಬರದುಕೊಟ್ಟ ಭೂದಾನ ಪತ್ರ ಸುರಸಾನ ೧೨೪೯ ಫ॥ ಅವನೆ ಕ॥ ಮಾಜಕೂರ ಕೋರೆಕೊಳಗೆ ಸರಕಾರ ಬಟಾಯಿ ಗದ್ದೆ ನಲಗೌಡನವರ ಪ್ಯಾಟಿ ಮಡಿ ಕೈಲಿ ಯಿಕ್ಕಳದ ಗದ್ದೆ ತಪೋನಿಧಿ ಮಹ ೧ ರಾ॥ ಲಕ್ಷ್ಮಣಗಿರಿ ಬಾವಾ ಗಣಪತಗಿರಿ ಬಾವಾ ಜಾಹಗೀರದಾರನವರು ತಂಮ್ಮಗೆ ಮಾನ್ಯ ಕೊಟ್ಟುಸವರಿ ಹೀಗದ್ದೆ ತೋರಿಸಿ ಚಕಬಂದಿ ಮಾಡಿ ಕೊಡೋ ಹಾಗೆ ಅಪ್ಪಣೆ ಬಂದ ಪ್ರಯುಕ್ತ ಯೀಗಾ ಪ್ಯಾಟಿಮಾಡಿ ಯಿಕ್ಕಳದ ಬೀಜಾವರಿದು ಕೊಟ್ಟು ಯಿದ್ದೆವು ಯಿದಕ್ಕೆ ಚತುರ್ದಿಕ್ಕು ನಿರ್ದೇಶ ಮಾಡಿದ ವಿವರವು —

---

೧ ಲಕ್ಷ್ಮಣಗಿರಿ ಬಾವಾ ಗಣಪತಗಿರಿ ಬಾವಾ ಇವರು ಅಣ್ಣತಮ್ಮಂದಿರು; ಮೋತಿಗಿರಿ ಬಾವಾನ ಮಕ್ಕಳು. ಇವರ ಊರು ಗುಲ್ಬರ್ಗಾ ಜಿಲ್ಲೆಯ ಸುರಪುರ. ಮೋತಿಗಿರಿ ಬಾವಾನ ಸಮಾಧಿ ಸುರಪುರದ ಮಧ್ಯದಲ್ಲಿದೆ; ಒಂದು ಗೋಪುರದ ಆಕಾರದಲ್ಲಿ ಅದನ್ನು ನಿರ್ಮಿಸಿದ್ದಾರೆ; ಅಲ್ಲಿ ಶಿವಲಿಂಗ ಸ್ಥಾಪಿಸಿದ್ದಾರೆ. ಇವೊತ್ತಿಗೂ ಜನರು ಅದನ್ನು ಮೋತಿಗಿರಿ ಬಾವಾನ ಸಮಾಧಿ ಎಂದು ಕರೆಯುತ್ತಾರೆ. ಆ ಓಣಿಗೆ ಬಾವಾಗಿರಿ ಓಣಿ ಎಂದು ಹೆಸರಿದೆ.

‘ ಗಿರಿ ’ ಎಂಬುದು ಸಂನ್ಯಾಸಿಗಳಿಗೆ ಇರುವ ಒಂದು ಹೆಸರು. ದಶವಿಧ ಸಂನ್ಯಾಸಿಗಳಲ್ಲಿ ‘ಗಿರಿ’ ಎಂಬ ಪಂಗಡದ ಸಂನ್ಯಾಸಿಗಳು ಬರುತ್ತಾರೆ.

ಮೋತಿಗಿರಿ ಬಾವಾ ಸಂನ್ಯಾಸಿಯಾಗಿದ್ದರೂ ಲಕ್ಷ್ಮಣಗಿರಿ ಮತ್ತು ಗಣಪತಗಿರಿ ಅವರ ಮಕ್ಕಳೆಂದೇ ಜನಜನಿತರಾಗಿದ್ದಾರೆ. ಅವರು ಅವನ ಶಿಷ್ಯರಾಗಿರಬೇಕು. (ಮೋತಿಗಿರಿ ಯವರಿಗೆ ಕಾಶೀಬಾಯಿ ಎಂಬ ಉಪಪತ್ನಿಯಿದ್ದು, ಆಕೆಯಿಂದ ಜನಿಸಿದವರೇ ಇವರೆಂದು ಹೇಳುವವರೂ ಇದ್ದಾರೆ; ಈ ಮಾತಿಗೆ ಆಧಾರವೇನೂ ಇಲ್ಲ.)

೧ ಪೂರ್ವಕ್ಕೆ ಸಜಾನವನ ಕುಣಿ ಯಿಂದವಾಸಿ ಸೀನಪ್ಪನ ಮಡಿ
೧ ಪಶ್ಚಿಮಕ್ಕೆ ಚನ್ನಮ್ಮನ ಗುಡಿಮಾರ್ಗ ಕುಣಿಮಡಿ
೧ ಉತ್ತರಕ್ಕೆ ಪುಚ್ಚಲದಿನ್ನಿ ಮಾರ್ಗ ಮಾಳೆ ಮಡಿ
೧ ದಕ್ಷಿಣಕ್ಕೆ ರಾಮುನಗೌಡನವರ ಪ್ಯಾಟಿಮಡಿ

ಯೀಪ್ರಕಾರ ನಿರ್ದೇಶಮಾಡಿಕೊಟ್ಟು ಹೀವಿ ತಮ್ಮ ಪುತ್ರ ಪೌತ್ರ ವಂಶಪಾರಂಪರ ಆಚಂದ್ರಾರ್ಕ ಅನುಭವಮಾಡಿಕೊಂಡು ಯಿರಬೇಕು. ವಾಸಿ ಮಾದಗರ ಭತ್ತ ಖಾರಾಖಮಾಡಿ ಆಯಗಾರ ವಗೈರೆ ದಾವಮು ಕೇಳಲಿಕ್ಕಿಲ್ಲ ಹೀಗೆಂದು ನಂಮ್ಮ ಸಂಮ್ಮತದಿಂದ ಬರದುಕೊಟ್ಟ ಭೂದಾನಪತ್ರ ಸಹಿ

## ವಪ್ಪಿತವು

| ಗೌಡರು— | ಕು॥ಗಳು— |
|---|---|
| ೧ ಚಿಕ್ಕಗೌಡನ ಮಗ ಕೇಶಿರೆಡಿ | ೧ ಕು॥ ದಾಸಪ್ಪ |
| ೧ ಬಸನಗೌಡ | ೧ ಚಿಕ್ಕ ನರಸಪ್ಪ |
| ೧ ರಾಮುನಗೌಡ ಗೌಡಪ್ಪ | ೧ ಕು॥ ಭಂಗೆ ಕ್ರಿಷ್ಟಪ್ಪ |
| ೧ ಮುಲೆ ನಗಪ್ಪಗೌಡ | ೧ ಕು॥ ವೆಂಕಣ್ಣನ ಮಗ ಸೀನಪ್ಪ |
| ೧ ಮಾ॥ ಗೌಡ ಸೂದ್ಯಾ ಹಂಪೈಯ್ಯ | |

## ಸಾಕ್ಷಿಗಳು

೧ ಮಲನಾಯ್ಕ
೧ ಕೇಶೈನಾಯ್ಕ

---

ಮೋತಿಗಿರಿ ಭಾರೀ ಶ್ರೀಮಂತರಾಗಿದ್ದರು. ಆ ಶ್ರೀಮಂತಿಕೆ ಅವರ ಶಿಷ್ಯದ್ವಯರಿಗೂ ಮುಂದುವರಿಯಿತು. ಅವರಲ್ಲಿ "ನಾಲ್ವತ್ತು ಅಂಕಣ' ಮನೆ ತುಂಬ ನಗನಾಣ್ಯಗಳಿದ್ದು ಪು· ಸುರಪುರ ಸಂಸ್ಥಾನದ ದೊರೆಗಳಿಗೆ ಇವರು ಸಾಲಕೊಡುತ್ತಿದ್ದರು. ಇವರ ಮನೆಯಲ್ಲಿ ಇನ್ನೂರಕ್ಕೂ ಮಿಕ್ಕಿ ಬಾವಾಜಿ (ಸಂನ್ಯಾಸಿ) ಗಳು ಇದ್ದರು. ಈ ಬಾವಾಜಿಗಳೆಲ್ಲ ಯುದ್ಧ ನಿಪುಣರಾಗಿದ್ದರು. ಆದರೆ ಹೇಳಿಕೊಳ್ಳುವಂತಹ ವಿದ್ವಾಂಸರೇನೂ ಆಗಿರಲಿಲ್ಲ.

ಈ ಬಾವಾಗಿರಿಯವರು ಅನೇಕ ಜನರಿಗೆ ದತ್ತಿಕೊಟ್ಟಿದ್ದಾರೆ. ಇಂದಿಗೂ ಅನೇಕ ಜನರು ಅವರ ದತ್ತಿ ಭೂಮಿಗಳನ್ನೇ ಉಳ್ಳವರಾಗಿದ್ದಾರೆ.

ರಾಯಚೂರು ತಾಲೂಕಿನ ಗುಂಜೆಹಳ್ಳಿ ಲಕ್ಷ್ಮಣಗಿರಿ ಗಣಪತಿಗಿರಿ ಬಾವಾ ಅವರ ಜಹಗೀರು ಆಗಿತ್ತು; ಪುಚ್ಚಲದಿನ್ನಿಯೂ ಆ ಜಹಗೀರಿಗೆ ಸೇರಿತ್ತು. ಇದೇ ಗುಂಜೆಹಳ್ಳಿಯಲ್ಲಿಯ ಒಂದು ಗದ್ದೆಯನ್ನು ಬಾವಾಗಿರಿಗಳು ಕವಿ ಸಂಗವಿಭುವಿಗೆ ಮಾನ್ಯಕೊಟ್ಟಿದ್ದರು. ಅದನ್ನು ಅವರು ಏತಕ್ಕಾಗಿ ಮಾನ್ಯಕೊಟ್ಟರೆಂಬುದು ತಿಳಿದು ಬರುವುದಿಲ್ಲ.

ಈ ಬಾವಾಗಿರಿ ಪೀಠಕ್ಕೆ ಸಂಬಂಧಿಸಿದ ಒಂದು ಭವ್ಯ ಮಠ ಈಗ ಪುಣೆಯಲ್ಲಿದೆ.

೧ ತಿಮ್ಮನಾಯ್ಕನ ಮಮ್ಮಗ ಲಚ್ಚಮ
೧ ವಿಠ್ಠಲನಾಯ್ಕ

ಚ ೧೨ ಮಾಹೆ ರಮಜಾನು ಸನ್ ೧೨೫೫ ಹಿಜರಿ

ಬಿ॥ ಕು॥ ಚಿಕ್ಕನರಸಪ್ಪನ ಮಗ ರಾಘಣ್ಣ

ಸಿದ್ಧಲಿಂಗಪ್ಪ ಮತ್ತು ಸಂಗವಿಭು ಎಂದು ತೀರಿಕೊಂಡರೆಂಬುದು ತಿಳಿದು ಬರುವುದಿಲ್ಲ. ಅವರ ತರುವಾಯ ಸಿದ್ಧಲಿಂಗಪ್ಪನ ಹೆಂಡತಿ ಲಿಂಗಮ್ಮ ರಾಜ್ಯಭಾರ ಮಾಡಿದಂತೆ ಮತ್ತು ಆಕೆ ಸಂಗವಿಭುವಿನ ಹೆಂಡತಿ ಸಿದ್ಧಮ್ಮನಿಗೆ ಮುಖ್ತಿಯಾರ (ಕಾರಭಾರ) ವಹಿಸಿಕೊಟ್ಟಂತೆ ಕಾಗದ ಪತ್ರಗಳಿಂದ ತಿಳಿದುಬರುತ್ತದೆ. ಲಿಂಗಮ್ಮ ಮತ್ತು ಸಿದ್ಧಮ್ಮನವರ ಕಾಲಕ್ಕಾಗಲೇ ಸಂಸ್ಥಾನ ಬ್ರಿಟಿಷರ ವಶವಾಗಿತ್ತು. ಆ ಬಳಿಕ ಅದು ನಿಜಾಮರ ಆಳಿಕೆಗೆ ಸೇರಿತು. ಲಿಂಗಮ್ಮನಿಗೆ ಚಾವರಾತಿ (ಜೀವನಾಂಶ) ದೊರಕಿದಂತೆ ರಶೀದಿಗಳ ನಕಲುಗಳು ದೊರಕುತ್ತವೆ. ಅವುಗಳ ಕೆಳಗೆ ಸಿದ್ಧಮ್ಮನ ರುಜು (ಸಹಿ) ಇದೆ. ಈ ರಶೀದಿಗಳು ಕ್ರಿ. ಶ. ೧೮೫೮ ರಿಂದ ದೊರಕಿದ್ದು ಕೆಲವು ಕುಂಪಣಿ ಸರಕಾರಕ್ಕೆ, ಕೆಲವು ನವಾಬ ನಸರತ್‌ಜಂಗನಿಗೆ ಬರೆದು ಕೊಟ್ಟವು ಇವೆ. ಕುಂಪಣಿ ಸರಕಾರಕ್ಕೆ ಸನ್ ೧೨೬೭ ಫಸಲಿ (ಕ್ರಿ. ಶ. ೧೮೫೮) ಯಲ್ಲಿ ಬರೆದುಕೊಟ್ಟ ರಶೀದಿಯಿದೆ. ಮೂರುವರ್ಷಗಳ ತರುವಾಯ ಸನ್ ೧೨೭೦ ಫಸಲಿ (ಕ್ರಿ. ಶ. ೧೮೬೧) ರಲ್ಲಿ ಹೈದರಾಬಾದ ಸರಕಾರಕ್ಕೆ ಬರೆದುಕೊಟ್ಟ ರಶೀದಿ ಹೀಗಿದೆ:

"ಸರಕಾರ ಫೈಜ ಆಸಾರ ನವಾಬ್ ನಸರತ್ ಜಂಗ ಬಹಾದ್ದೂರವರ ಖಿದಮತಿಗೆ—

ರಶೀದಿ ಜೈ॥ ಲಿಂಗಮ್ಮ ನಾಡಗೌಡ ತಾ॥ ರಾಯಚೂರು ಇವರ ಕಡಿಂದ ಮುಖ್ತಿಯಾರ ವಹಿಸಿದ ಸಿದ್ಧಮ್ಮನು ಬರಕೊಟ್ಟ ರಶೀದಿಯೇನಂದರೆ ಸಾಲ ಮಜಕೂರ ಸನ್ನ ೧೨೭೦ ಫಸಲಿ ಬಾ॥ ನಮಗೆ ಮುಟ್ಟತಕ್ಕ ಚಾವರಾತಿ ತಾ॥ ಮಾ॥ ಅೈವಜ್ ಕುಲ್ ರೂ. ೨೦೬೭–೧ ಪೈ ಪೈಕಿ ಅಜಮುತದಾರನವರ ಅಮಲಿನಲ್ಲಿ ವಸೂಲ್ ಆಗಿ ನಮಗೆ ಕೊಟ್ಟದ್ದು ಅಲಾಹಿದಾ ರಶೀದಿ ಪ್ರಕಾರ........"

ಲೋಕದಲ್ಲಿ ಈ ರೀತಿಯಾಗಿ ನಾದಿನಿ ಅತ್ತಿಗೆಯರು ಸಂಸ್ಥಾನದ ಆಡಳಿತ ನಡೆಸಿದ್ದು, ಈ ರೀತಿಯಾಗಿ ಪ್ರೀತಿಯಿಂದ ಒಮ್ಮನಸ್ಸಿನಿಂದ ಇದ್ದುದು ಹೊಸತು.

ಮೇಲಿನ ಎಲ್ಲ ಬಾಹ್ಯ ಪ್ರಮಾಣಗಳಿಂದ ಈ ರೀತಿ ನಿರ್ಣಯಕ್ಕೆ ಬರಬಹುದು.

೧) ಸಂಗವಿಭು (ಸಂಗಪ್ಪ) ವಿನ ಬಗೆಗೆ ದೊರೆತ ಎರಡೂ ಪತ್ರಗಳಲ್ಲಿ ನಂದವಾರ ಸಂಗಪ್ಪ ಎಂದಿರುವುದರಿಂದ ಆತನ ಊರು 'ನಂದವಾರ' ಎಂಬುದು ಸ್ಪಷ್ಟವಾಗಿದೆ. ನಂದವಾರ ಆದವಾನಿ ತಾಲೂಕಿನಲ್ಲಿದೆ.

೨) ಶಾ. ಶ. ೧೭೫೩ ರ ಪತ್ರದಿಂದ "ಆತನ ಸಂಬಂಧಿಕರು ರಾಯಚೂರಿನಲ್ಲಿದ್ದರು. ಅವರಿಗೆ ಇನಾಮತಿ ಭೂಮಿಯಿತ್ತು. ತಂಗಮ್ಮನ ತರುವಾಯ ಆ ಮನೆ

ತನಕ್ಕೆ ಯಾರೂ ವಾರಸುದಾರರು ಇಲ್ಲದ ಕಾರಣ ಆ ಇನಾಮತಿ ಭೂಮಿಯನ್ನು ಗೌಡ ಕುಲಕರ್ಣಿಯರು ನಿಮ್ಮ ಹಿರೇರ ಮಿರಾಸಿ ಎಂದು ಹೇಳಿ ಆತನಿಗೆ ಕೊಟ್ಟರು–'' ಎಂಬುದು ಸ್ಪಷ್ಟವಾಗುತ್ತದೆ. ಚತುರ್ದಿಕ್ಕಿನ ನಿರ್ದೇಶನದಲ್ಲಿ ಪೂರ್ವಕ್ಕೆ ತೋರಿಸಿದ ''ಝರೆ ಬೆಟ್ಟದ ಹಿರೆಮಾರ್ಗ'' ಸರಿಯಾಗಿದೆ. ಈಗಿನ ರಾಜೇಂದ್ರಗಂಜ್ ಮತ್ತು ಪೋಲೀಸ್ ಕ್ವಾರ್ಟರ್ಸ್‌ಗಳಿರುವ ಸ್ಥಳವೇ ಆ ಇನಾಮತಿಯ ಹೊಲವಾಗಿರಬೇಕು.

೩) ಎರಡನೆಯ ಪತ್ರದಲ್ಲಿ ಬರುವ ಗುಂಜೆಹಳ್ಳಿ ರಾಯಚೂರಿನಿಂದ ದಕ್ಷಿಣಕ್ಕೆ ೧೨ ಮೈಲುಗಳ ಮೇಲಿರುವ ಗುಂಜೆಹಳ್ಳಿಯೇ. ಅಲ್ಲಿಯ ಹೊಲದ ದಿಕ್ಕು ನಿರ್ದೇಶನ ದಲ್ಲಿ ಬರುವ 'ಇಂದುವಾಸಿ ಮತ್ತು ಪುಚ್ಚಲದಿನ್ನಿ' ಎಂಬ ಊರುಗಳ ಹೆಸರಿನಿಂದ ಇದು ರಾಯಚೂರು ತಾಲೂಕಿನಲ್ಲಿರುವ ಗುಂಜೆಹಳ್ಳಿಯೆಂಬುದು ಖಚಿತವಾಗುತ್ತದೆ.

೪) ಶಾ. ಶ ೧೭೬೧ ರ ಪತ್ರದಲ್ಲಿ ಆತನಿಗೆ ಸಂಗಪ್ಪ ನಂದವಾರ ಸಾ॥ ನಾಡ ಗೌಡ'' ಎಂದು ಕರೆದಿರುವುದರಿಂದ ಆತ ದೊರೆಯಾಗಿದ್ದುದು ನಿಜವೆಂದು ತಿಳಿಯು ತ್ತದೆ. ಆತ ತನ್ನನ್ನು 'ಸಂಗವಿಭು' ಎಂದು ಕರೆದುಕೊಳ್ಳುತ್ತಾನೆ. ಆತನು ತನ್ನ ಕುಮಾರವಿಜಯ ಕಾವ್ಯದಲ್ಲಿ ತನ್ನ ತಂದೆ ತಾಯಿಗಳನ್ನು ರಾಜ-ರಾಣಿಯರೆಂದೇ ಹೇಳುತ್ತಾನೆ.

ಶ್ರೀಮನ್ನಲ್ಲಂಗಿ ವಂಶಾರ್ಣವ ನವಘನಸೋಮಂ ಮಹಾಕೀರ್ತಿ ವೀರ್ಯೋ
ದ್ಧಾಮಂ ಗೌಡಪ್ಪನಾಮಂ ವಿಭುವೆಸೆದಿಹ ತದ್ಧರ್ಮ ಭಾರ್ಯಾಕುಲಾರ್ಯಾ
ರಾಮಾಂಬಾ ರಾಜಕನ್ಯಾಮಣಿ ಮೆರೆಯಲು ತದ್ಗರ್ಭ ಸಂಜಾತ ಪಂಪಾ
ಧಾಮಂ ಶ್ರೀಪಾದ ಹೃತ್ಸಂಗವಿಭು ಗುರುಪದಾಂಭೋಜ ಪಾಂಶೂತ್ತಮಾಂಗಂ

ಇದರಿಂದ ಆತನದು ನಲ್ಲಂಗಿ ವಂಶವೆಂದು ತಿಳಿಯುತ್ತದೆ. ಅಲ್ಲದೆ ಆತ ರಾಜಮನೆತಕ್ಕೆ ಸೇರಿದ್ದನೆನ್ನಲಿಕ್ಕೆ ಇನ್ನಷ್ಟು ಪುಷ್ಟಿದೊರೆಯುತ್ತದೆ.

೫) ಸಂಗವಿಭು ತನ್ನ ಊರಿನ ಹೆಸರನ್ನು ಎಲ್ಲಿಯೂ ಹೇಳಿಕೊಂಡಿಲ್ಲ. ಗಣೇ ಕಲ್ಲಿನ ಹೆಸರನ್ನೂ ಆತ ಹೇಳುವುದಿಲ್ಲ. ನಂದವಾರದ ನಾಡಗೌಡನಾದ ಈತನಿಗೆ ಗಣೇಕಲ್ಲಿನ ನಾಡಗೌಡರ ಮಗಳಾದ ಸಿದ್ಧಮ್ಮನನ್ನು ಮದುವೆ ಮಾಡಿಕೊಟ್ಟಿರಬೇಕು. ತಂಗಮ್ಮನ ಮಿರಾಸಿ ಆತನಿಗೆ ಸಿಕ್ಕುದು ಕ್ರಿ. ಶ. ೧೮೩೨ (ಶಾ. ಶ. ೧೭೫೪) ರಲ್ಲಿ. ಅದಕ್ಕೆ ಮೊದಲೇ ಆತನ ಮದುವೆಯಾಗಿರಬೇಕು. ರಾಯಚೂರಿನ ಆಸ್ತಿ ದೊರಕಿದ ಬಳಿಕ ಆತ ಇಲ್ಲಿಗೇ ಬಂದು ನೆಲಸಿರಬೇಕು; ಇಲ್ಲಿ ಏನೋ ಮಹತ್ವದ ಕೆಲಸ ಮಾಡಿರ ಬೇಕು. ಆದುದರಿಂದ ಆತನಿಗೆ 'ಲಕ್ಷ್ಮಣಗಿರಿ ಬಾವಾ ಗಣಪತಿಗಿರಿ ಬಾವಾ' ಮಾನ್ಯ ಕೊಟ್ಟಿರಬೇಕು. ಇದಕ್ಕಿಂತ ತುಸುಹಿಂದೆ ಪಟ್ಟೇದಾರ ದೂರಯಾದ ಸಿದ್ಧಲಿಂಗಪ್ಪ ತನ್ನ ಭಾವನಿಗೆ ತನ್ನ ಸಂಸ್ಥಾನದ ಕಾರಭಾರ ವಹಿಸಿರಬೇಕು.

೬) ಗುಂಜೆಹಳ್ಳಿ ಪತ್ರದಲ್ಲಿರುವ ಸರಕಾರ ರಾಯಚೂರು ಎಂಬ ಮಾತಿನಿಂದ ಆತ ಗಣೇಕಲ್ ಸಂಸ್ಥಾನದ ಕಾರಭಾರ ನಡೆಸಿದ್ದು ಸತ್ಯವೆನಿಸುತ್ತದೆ. ಗಣೇಕಲ್ಲಿನ

ನಾಡಗೌಡರಿಗೆ "ರಾಯಚೂರು ನಾಡಗೌಡರು," "ನಾಡಗೌಡರು ರಾಯಚೂರು" "ಸರಕಾರ ರಾಯಚೂರು" ಎಂದು ಕರೆಯುತ್ತಿದ್ದರೆಂದು ಕಾಗದ ಪತ್ರಗಳಿಂದ ತಿಳಿಯುತ್ತದೆ. ರಾಯಚೂರು ಅವರ ಸಂಸ್ಥಾನದಲ್ಲಿಯೇ ಸೇರಿರಬೇಕು. ನಿಜಾಮರ ಆಳಿಕೆಯಲ್ಲಿಯು ಅವರ ಮನೆತನದ ಕಾಗದ ಪತ್ರಗಳಲ್ಲಿ ಚಾವರಾತಿನ (ಜೀವನಾಂಶ) ಪಾವತಿಗಳಲ್ಲಿ ನಾಡಗೌಡರು ತಾಲೂಕಾ ರಾಯಚೂರು ಎಂದಿದೆ. ಸಂಗವಿಭುವಿಗೆ ಸರಕಾರ ರಾಯಚೂರು ಎಂದು ಕರೆದಿರುವುದಿಂದ ಆತ ಗಣೇಕಲ್ ಸಂಸ್ಥಾನದ ರಾಜ್ಯಭಾರ ಮಾಡಿದ್ದು ಸತ್ಯವೆನಿಸುತ್ತದೆ.

೭) ಆತ ಸಂಸ್ಥಾನದ ಕಾರಭಾರ ಮಾಡಿದ್ದು ಸತ್ಯವಾದರೆ ಸಿದ್ಧಲಿಂಗಪ್ಪನ ಭಾವನಾಗಿದ್ದುದೂ ಸತ್ಯ.

೮) ಸಿದ್ಧಲಿಂಗಪ್ಪ ನಾಡಗೌಡನಿಗೆ ಸಂಗವಿಭು ಸಂಬಂಧಿಕನಾಗಿ ಗಣೇಕಲ್ಲಿನಲ್ಲಿ ಕಾರಭಾರ ನಡೆಸಿದುದರಿಂದಲೇ ಆತನ ಕಾಗದ ಪತ್ರಗಳು ಗಣೇಕಲ್ ನಾಡಗೌಡರ ಮನೆತನದ ಕಾಗದ ಪತ್ರಗಳಲ್ಲಿ ಸೇರಿಕೊಂಡಿವೆ.

೯) ಸಿದ್ಧಲಿಂಗಪ್ಪ ಮತ್ತು ಸಂಗವಿಭುವಿನ ಕಾಗದ ಪತ್ರಗಳ ಕಾಲ ಒಂದೇ ಆದುದರಿಂದ ಸಂಗವಿಭು ಗಣೇಕಲ್ ಸಂಸ್ಥಾನದ ಕಾರಭಾರು ವಹಿಸಿಕೊಂಡುದು ನಿಜ.

೧೦) ಸಿದ್ಧಲಿಂಗಪ್ಪ ಮತ್ತು ಸಂಗವಿಭು ತೀರಿಕೊಂಡ ಬಳಿಕ ಅವರು ಹಾಕಿಕೊಟ್ಟ ಮಾರ್ಗವನ್ನೇ ತುಳಿದಿರಬೇಕು ಅವರ ಹೆಂಡಂದಿರು. ಗಂಡನ ದಾರಿಯಲ್ಲಿ ನಡೆದು ಲಿಂಗಮ್ಮ ಸಂಗವಿಭುವಿನ ಹೆಂಡತಿಯಾದ ಸಿದ್ಧಮ್ಮನಿಗೆ (ನಾದಿನಿಗೆ) ಸಂಸ್ಥಾನದ ಮುಖ್ತಿಯಾರ (ಕಾರಭಾರ) ವಹಿಸಿಕೊಟ್ಟಿರಬೇಕು.

೧೧) ಸಿದ್ಧಮ್ಮ ತವರು ಮನೆಯಲ್ಲಿಯೇ ಕೊನೆಯವರೆಗೆ ಇದ್ದುದು ಸಂಗವಿಭು ನಂದವಾರ ಬಿಟ್ಟು ಬಂದು ಇಲ್ಲಿಯೇ ನೆಲಿಸಿದ್ದನೆಂಬುದಕ್ಕೆ ಪುಷ್ಟಿಕೊಡುತ್ತದೆ.

೧೨) ಸಂಗವಿಭು ಮತ್ತು ಸಿದ್ಧಲಿಂಗಪ್ಪ — ಇವರ (ಕೈಯಿಂದ ಬರೆದ) ಮೊಗಲ್-ಡೆಕ್ಕನ್ ಶೈಲಿಯ ಎರಡು ಭಾವಚಿತ್ರಗಳು ಸಿಕ್ಕಿವೆ. ಒಂದರ ಕೆಳಗೆ 'ಸರ್ ಸಿದ್ಧಲಿಂಗಪ್ಪ ನಾಡಗೌಡ ಗ॥' (ಗಣೇಕಲ್) ಎಂದಿದೆ. ಇನ್ನೊಂದು ಚಿತ್ರ ಕವಿ ಸಂಗವಿಭುವಿನದು. ಇದರ ಕೆಳಗೆ ಹೆಸರಿಲ್ಲ. ಇದು ಸಂಗವಿಭುವಿನದೇ ಎಂದು ಆತನ ವಂಶಜರು ಹೇಳುತ್ತಾರೆ. ತಾತ ಮುತ್ತಾತರಿಂದ ಅವರು ಇದನ್ನು ಅರಿತಿದ್ದಾರೆ. ಈ ಎರಡು ಚಿತ್ರಗಳು ಒತ್ತಟ್ಟಿಗೆ ಸಿಕ್ಕುವುದರಿಂದ ಸಂಗವಿಭು ಸಿದ್ಧಲಿಂಗಪ್ಪನ ಭಾವ ಮೈದುನನಾಗಿರಲೇಬೇಕೆಂಬುದಕ್ಕೆ ಇನ್ನಷ್ಟು ಪುಷ್ಟಿ ದೊರೆಯುತ್ತದೆ.

ಕ್ರಿ. ಶ. ೧೮೫೮ ರಲ್ಲಿ ಸಿದ್ಧಮ್ಮ ಬರೆದುಕೊಟ್ಟ ಚಾವರಾತಿನ ರಸೀದಿಯಿಂದ ಅದಕ್ಕಿಂತ ಹಿಂದೆಯೇ ಸಂಗವಿಭು ಮತ್ತು ಸಿದ್ಧಲಿಂಗಪ್ಪ ತೀರಿಕೊಂಡಿದ್ದರೆಂದು ತಿಳಿಯುತ್ತದೆ; ಆದರೆ ಎಂದು ಎಂಬುದು ಖಚಿತ ತಿಳಿಯುವದಿಲ್ಲ.

ಕ್ರಿ. ಶ. ೧೮೩೨ ರಲ್ಲಿ ಸಂಗವಿಭುವಿಗೆ ರಾಯಚೂರಿನ ನಾಡಗೌಡ ತಂಗಮ್ಮನ ಆಸ್ತಿ ಸಿಕ್ಕುವುದು. ಅದಕ್ಕೆ ಹಿಂದೆಯೇ ಆತ ಗಣೇಕಲ್ಲಿನ ಸಿದ್ಧಮ್ಮನನ್ನು ಮದುವೆಯಾಗಿರಬೇಕು. ಆದರೆ ೧೮೩೨ ರ ತರುವಾಯವೇ ರಾಯಚೂರು ಮತ್ತು ಗಣೇಕಲ್ಲುಗಳಲ್ಲಿ ನೆಲಿಸಿರಬೇಕು. ಕ್ರಿ. ಶ. **೧೮೩೨ ರಿಂದ** ಕ್ರಿ. ಶ. **೧೮೫೬ ರ** ಅವಧಿಯಲ್ಲಿ ಆತ ಕಾವ್ಯಗಳನ್ನು ರಚಿಸಿರಬೇಕು.

## ಕಾವ್ಯಗಳು

ಸಂಗವಿಭು ಬರೆದ ಕಾವ್ಯಗಳು ನಾಲ್ಕು :

೧. ಬಸವ ಶತಕ

೨. ಭುವನೈಕನಾಯಕೀ ಶತಕ

೩. ಪಂಪಾ ಶತಕ

೪. ಕುಮಾರ ವಿಜಯ

ಭುವನೈಕನಾಯಕೀ ಶತಕವೊಂದನ್ನುಳಿದು ಇನ್ನಿತರ ಮೂರು ಕಾವ್ಯಗಳಲ್ಲಿ ಸಂಗವಿಭು ತಾನು ಕೃತಿಕರ್ತನೆಂದು ಹೇಳಿಕೊಂಡಿದ್ದಾನೆ. ಭುವನೈಕನಾಯಕೀ ಶತಕದಲ್ಲಿ ಬಹುಶಃ ಇನ್ನೂ ಒಂದೆರಡು ಪದ್ಯಗಳನ್ನು ಬರೆಯುವವನಿದ್ದನೇನೋ ? ಪಂಪಾ ಶತಕ ಮತ್ತು ಬಸವ ಶತಕಗಳಲ್ಲಿ 'ಇದನ್ನು ಬರೆದು ಓದಿದವರಿಗೆ ಒಳ್ಳೆಯದಾಗಲಿ' ಎಂದು ಹಾರಯಿಸುವ ಪದ್ಯಗಳಿವೆ. ಇಂಥ ಪದ್ಯ ಭುವನೈಕನಾಯಕೀ ಶತಕದಲ್ಲಿಲ್ಲ. ಆದುದರಿಂದ ಈ ಶತಕ ಅಪೂರ್ಣವಿರುವಂತೆ ಕಾಣಿಸುತ್ತದೆ. ಭುವನೈಕನಾಯಕೀ ಶತಕವೂ ಇದೇ ಕವಿಯದೆಂದು ಹೇಳಲು ಶೈಲಿ, ಭಾಷೆ, ಭಾವಗಳ ಆಂತರಿಕ ಪ್ರಮಾಣಗಳಲ್ಲದೆ ಬಾಹ್ಯ ಪ್ರಮಾಣವೂ ಇದೆ. ಸುಮಾರು ನೂರುವರ್ಷ ಹಿಂದಿನದೆನ್ನಬಹುದಾದ ಕೋರಿಕಾಗದದ ಕೈಬರಹದ ಪುಸ್ತಕದಲ್ಲಿ ಈ ಕವಿಯ ಮೂರು ಶತಕಗಳಿವೆ. ಬಸವ ಶತಕ ಮತ್ತು ಪಂಪಾ ಶತಕಗಳ ನಡುವೆ ಭುವನೈಕನಾಯಕೀ ಶತಕವನ್ನು ಬರೆಯಲಾಗಿದೆ. ಶತಕದ ಪ್ರಾರಂಭಕ್ಕೆ "ಶ್ರೀಮನ್ನಲ್ಲಿಂಗಿ ಸಂಗವಿಭು ವಿರಚಿತ ಭುವನೈಕನಾಯಕೀ ಶತಕ" ಎಂದಿದೆ. ಕೊನೆಗೆ "ಇತಿ ಶ್ರೀಮನ್ನಲ್ಲಿಂಗಿ ಸಂಗವಿಭು ವಿರಚಿತಮಪ್ಪ ಭುವನೈಕನಾಯಕೀ ಶತಕವು ಸಂಪೂರ್ಣಂ" ಎಂದಿದೆ. ಇನ್ನುಳಿದ ಶತಕಗಳಿಗೂ ಹೀಗೆಯೇ ಬರೆಯಲಾಗಿದೆ. ಈ ಬರವಣಿಗೆಯಿಂದ, ಒಂದೇ ಹಸ್ತಪ್ರತಿಯಲ್ಲಿ ಮೂರು ಶತಕಗಳು ಒಟ್ಟಿಗೆ ಇರುವದರಿಂದ ಮತ್ತು ಶೈಲಿಯ ಸಾಮ್ಯದಿಂದ ಭುವನೈಕನಾಯಕೀ ಶತಕವು ಇದೇ ಕವಿಯಿಂದ ರಚಿತವಾಗಿದೆಯೆಂದು ಖಚಿತವಾಗಿ ನಂಬಬಹುದು.

## ಕುಮಾರ ವಿಜಯ[೧]

ಭಾವ, ಭಾಷೆ, ಸತ್ವ, ಶೈಲಿ ಮುಂತಾದ ದೃಷ್ಟಿಗಳಿಂದ ಅಭ್ಯಾಸಮಾಡಿದಾಗ ಕವಿಯು ಶತಕಗಳನ್ನು ಮೊದಲು ಬರೆದು, ಲೆಕ್ಕಣಿಕೆ ಪಳಗಿದ ಬಳಿಕ ಕುಮಾರವಿಜಯ ಬರೆದನೆಂದು ಊಹಿಸಲವಕಾಶವಿದೆ.

ಕುಮಾರ ವಿಜಯ ಒಂದು ಚಂಪೂ ಮಹಾಕಾವ್ಯ. ಮಹಾಕಾವ್ಯದ ಲಕ್ಷಣ ಗಳೆಲ್ಲವೂ ಈ ಕಾವ್ಯದಲ್ಲಿವೆ. ಇದು ಕವಿಚರಿತ್ರೆಕಾರರ ದೃಷ್ಟಿಗೆ ಬೀಳದಿರುವುದು ದುರ್ದೈವದ ಸಂಗತಿ. ಈ ಕಾವ್ಯ ಪ್ರಕಟವಾಗಿ, ವಿಮರ್ಶಕರು ಒರೆಗಲ್ಲಿಗೆ ಹಚ್ಚಿ ಒರೆದು ನೋಡಿದಾಗ, ಸಹೃದಯರು ಇದರಲ್ಲಿಯ ರಸವನ್ನು ಸವಿದಾಗ, ಪಂಡಿತರು ಇದರಲ್ಲಡಗಿರುವ ಪಾಂಡಿತ್ಯ ಪ್ರೌಢಿಮೆಗಳಿಗೆ ಬೆರಗುವಟ್ಟಾಗ ಷಡಕ್ಷರದೇವನವರೆಗೆ ಗೆರೆಕೊರೆದುಕೊಂಡು ನಿಂತ ಚಂಪೂ ಯುಗಕ್ಕೆ ಮುಂದೆ ಸುಮಾರು ಎರಡು ಶತಮಾನ ದಷ್ಟು ಹೆಚ್ಚಿನ ಆಯುಷ್ಯ ದೊರೆಯುವುದು. ಷಡಕ್ಷರದೇವನ ತರುವಾಯ ಚಂಪೂ ಕಾವ್ಯ ಅಲ್ಲಲ್ಲಿ ತಲೆದೋರಿದರೂ ಅದು ಪುಷ್ಟಿಗೊಂಡು ಬೆಳೆದು ವಿಮರ್ಶಕರ ಒರೆ ಗಲ್ಲಿಗೆ ಮೈಗೊಟ್ಟು ನಿಲ್ಲುವಷ್ಟು ಶಕ್ತಿಯುಳ್ಳದಾಗಿರಲಿಲ್ಲ. ಷಡಕ್ಷರದೇವನ ತರು ವಾಯ ಚಂಪೂಕಾವ್ಯವನ್ನು ಸತ್ವಯುತವಾಗಿ ಬೆಳೆಸಿ ಉಳಿಸಿದ ಕೀರ್ತಿ ಸಂಗವಿಭು ವಿನದು.

ಸಂಗವಿಭು ಕನ್ನಡ, ಸಂಸ್ಕೃತ ಸಾಹಿತ್ಯದಲ್ಲಿ ಅದ್ವಿತೀಯ ಪಾಂಡಿತ್ಯವುಳ್ಳಾತ. ಪಾಂಡಿತ್ಯಪ್ರತಿಭೆಗಳು ಆತನಲ್ಲಿ ಒಗ್ಗೂಡಿದ್ದವು. ಆತ ಸಕಲ ಶಾಸ್ತ್ರನಿಪುಣ. ೧೮ ನೆಯ ಶತಮಾನದ ಪೂರ್ವಾರ್ಧದ ಕಾಲ ಸಾಹಿತ್ಯದ ಸೃಷ್ಟಿಯಿಂದ ಅಷ್ಟೇನು ಮಹತ್ವದ ಕಾಲವಲ್ಲ. ಸಾಂಗತ್ಯ, ಷಟ್ಪದಿ, ಹಾಡುಗಬ್ಬಗಳ– ಅದೂ ಹೇಳಿಕೊಳ್ಳ ಲಾರದಂಥ– ಕಾವ್ಯಗಳು ಸೃಷ್ಟಿಯಾಗಿದ್ದುವು. ಭಾಷೆ ಹೊಸಗನ್ನಡಕ್ಕೆ ತಿರುಗು ತ್ತಿತ್ತು. ಗದ್ಯಕ್ಕೆ ಪುರಸ್ಕಾರ ಬರಹತ್ತಿತ್ತು. ರಾಜಕೀಯ ದೃಷ್ಟಿಯಿಂದಂತೂ ಕೋಲಾಹಲದ ಕಾಲ. ಷಡಕ್ಷರದೇವನ ತರುವಾಯದ ದೀರ್ಘ ಅವಧಿ ಮಹಾ ಕಾವ್ಯದ ಝೇಂಕಾರವಿಲ್ಲದೆ ಮೌನಿಯಾಗಿತ್ತು. ಕಾವ್ಯ ಪ್ರಪಂಚಕ್ಕೆ, ರಸಿಕರಿಗೆ ಅದು ಸಹಿಸಲಾರದ ಮೌನ. ಆ ಮೌನಕ್ಕೆ ನಾಲಗೆ ಮೂಡಿಸಿ ಮಹಾಕಾವ್ಯ ಸೃಷ್ಟಿಸಿದ ಧೀರ ಕವಿ ಸಂಗವಿಭು.

ಹರೀಶ್ವರ, ರಾಘವ, ಭೀಮಕವಿ ಮೊದಲಾದ ಪೂರ್ವಕವಿಗಳನ್ನು ಸಂಗವಿಭು ಹೃದಯತುಂಬಿ ಹೊಗಳುತ್ತಾನೆ. ಆದರೆ ಆತನಿಗೆ ಷಡಕ್ಷರದೇವನಲ್ಲಿ ಪ್ರೀತಿ, ಅಭಿಮಾನ ಹೆಚ್ಚು. ಇದಕ್ಕೆ ಕಾರಣ ಇಬ್ಬರ ಮನಸಿನ ಒಲವು ಒಂದೇ. ಅವರ ಜಾಯಮಾನಕ್ಕೆ, ಅವರ ಕಾವ್ಯವಿಲಾಸಕ್ಕೆ ಒಗ್ಗಿದುದು ಚಂಪೂ ಮಾರ್ಗವೇ.

---

೧ ಸಂಪಾದಿಸಿ ಅಚ್ಚಿಗೆ ಸಿದ್ಧಗೊಳಿಸಲಾಗಿದೆ.

ಸಂಗವಿಭು ಹೇಳುತ್ತಿದ್ದ ಮಾತೊಂದು ಜನರ ನಾಲಗೆಯಲ್ಲಿ ಇನ್ನೂ ನಿಂತಿದೆ. "ಲಕ್ಷ್ಮೀಶ ನನಗೆ ತಮ್ಮ, ಷಡಕ್ಷರಿ ಅಣ್ಣ" ಎನ್ನುತ್ತಿದ್ದನಂತೆ ಆತ. ಕನ್ನಡ ನಾಡಿನಲ್ಲಿ ಅತ್ಯಂತ ಜನಪ್ರಿಯರಾದ ಈ ಇಬ್ಬರು ಕವಿಗಳ ಕಾವ್ಯಗಳನ್ನು ಆತ ಅಭ್ಯಸಿಸಿ ಮೈಗೂಡಿಸಿಕೊಂಡಿದ್ದನೆಂದು ಇದರಿಂದ ಧ್ವನಿತವಾಗುತ್ತದೆ. ಅಣ್ಣನಾದ ಷಡಕ್ಷರ ದೇವನನ್ನು ಕುರಿತು ಭಕ್ತಿಯಿಂದ ಹೀಗೆ ಹೇಳುತ್ತಾನೆ :

ಬಾಣನ ಸದ್ಗುಣಾಸ್ಪದ ಪದದೃಢಮಂ ಭವಭೂತಿಶಕ್ತಿ ಸ
ತ್ರಾಣವನಂತನಾಮಕನ ಗೂಢಪದಸ್ಥಿತಿಭಾವಮೂರ್ಜಿತಂ
ಮಾಣದೆ ವೃತ್ತಸದ್ರುಚಿಯು ಭಾನುವಿನಿಂತುಗುಣಾನುಪೂರ್ವಿಕ
ಶ್ರೇಣಿಯು ವಾಣಿಯಲ್ಲಿ ನೆಲೆಗೊಂಡ ಷಡಕ್ಷರದೇವನರ್ಚಿಪೇಂ

(ಕುಮಾರವಿಜಯ ಪ್ರಕರಣ ೧ ಪದ್ಯ ೨೭)

ಷಡಕ್ಷರದೇವನನ್ನು ಸಂಗವಿಭು ಭಕ್ತಿಯಿಂದ ಅರ್ಚಿಸಿದ; ಆತನ ಮಾರ್ಗದಲ್ಲಿಯೇ ಮುನ್ನಡೆದ; ಚಂಪೂಕಾವ್ಯಕ್ಕೆ ಹೊಸ ಜೀವವಿತ್ತ.

ಸಂಗವಿಭುವಿಗೆ ಕುಮಾರನ ಕಥೆಗೆ ಮೂಲ ಕಾಳಿದಾಸನ ಕುಮಾರ ಸಂಭವ:

ಇಂತು ವಿಶಿಷ್ಟಶಿವಾದ್ವೈ
ತಂ ತಳೆದ ಮಹಾನುಭಾವರೊಲವಿಂ ನಲವಿಂ
ಸಂತತಮತುಲಂತತಪದ
ಮಂ ತುತಿಸಿ ಕುಮಾರಸಂಭವಂ ಕನ್ನಡಿಪೇಂ

(ಕು. ವಿ. ಪ್ರಕರಣ ೧ ಪದ್ಯ ೨೯)

ಕಾಳಿಗೆ ದಾಸನಾಗಿ ಕವಿರಾಜ ಶಿರೋಮಣಿ ಚಕ್ರವರ್ತಿಯಂ
ಬಾಳುತನಂ ವಿಶೇಷ ಧರಣೀಧವ ಭೋಜಸಭಾಪ್ರವೇಶಮಂ
ತಾಳಿದ ಮಾಳ್ಕೆ ತೋರಿ ಮಿಗೆ ಬಾಳಿದ ಸತ್ಕವಿ ಕಾಳಿದಾಸ ತಾಂ
ಪೇಳಿದ ಸತ್ಕಥಾ ಸರಣಿ ವೈಖರಿಯಂ ನೆರೆಯಿಂದು ಬಣ್ಣಿಪೆಂ

(ಕು. ವಿ. ಪ್ರಕರಣ ೧ ಪದ್ಯ ೩೦)

ಎಂದು ಕವಿ ಹೇಳಿಕೊಂಡಿದ್ದರೂ ಆತನ ಕಾವ್ಯ ಕುಮಾರಸಂಭವದ ಪ್ರತಿಕೃತಿಯಲ್ಲ; ಅದೊಂದು ಸ್ವತಂತ್ರ ಕೃತಿ. ಕುಮಾರವಿಜಯದಲ್ಲಿ ಕವಿ ಅನೇಕ ಕಡೆ ಕಥೆಯ ದೃಷ್ಟಿಯಿಂದ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ. ಉದಾಹರಣೆಗೆ: ವೀರಭದ್ರನು ದಕ್ಷಯಾಗವನ್ನು ನಾಶಪಡಿಸಿದ ಬಳಿಕ ಬ್ರಹ್ಮನು ಶಿವನನ್ನು ಪ್ರಾರ್ಥಿಸುವನು. ಶಿವನು ಪ್ರತ್ಯಕ್ಷನಾಗಿ ಬ್ರಹ್ಮನ ಬೇಡಿಕೆಯಂತೆ ಯಜ್ಞವನ್ನು ಪೂರ್ಣಗೊಳಿಸಿ ಹೋಗುವನು. ಈ ಕಥಾಭಾಗ ಹೊಸದು. ಇದಕ್ಕೆ ಆಕರ ಯಾವುದೋ ?

ಕವಿಯ ಒಲವು ಕಥೆಗಿಂತ ವರ್ಣನೆ ಕಡೆಗೇ ಹೆಚ್ಚಿದೆ. ಹೊಸ ಹೊಸ ಉಪಮಾನ, ಉತ್ಪ್ರೇಕ್ಷೆ, ಹೊಸ ಹೊಸ ನವುರಾದ ಭಾವನೆಗಳಿಂದ ತುಂಬಿದೆ ಆತನ ಕಾವ್ಯ. ಪಾರ್ವತಿಯ ವರ್ಣನೆಗೆ ಒಂದು ಆಶ್ವಾಸದಲ್ಲಿ ಮುಕ್ಕಾಲು ಭಾಗ ಮೀಸ

ಲಾಗಿರಿಸಿದ್ದಾನೆಂದರೆ ವರ್ಣನೆಯ ಬಗೆಗೆ ಆತನ ಒಲವು ಎಷ್ಟೆಂಬುದು ತಿಳಿಯಬಹುದು. "೧................ ಕಥೆಯ ಗತಿ ಕಡಮೆ; ವರ್ಣನೆಯ ವಿವರ ಹೆಚ್ಚು. ಉತ್ಪ್ರೇಕ್ಷೆಯ ಮೇಲೆ ಉತ್ಪ್ರೇಕ್ಷೆ, ಕಲ್ಪನೆಯ ಮೇಲೆ ಕಲ್ಪನೆ ಬರುವುದರಿಂದ ಸಾಂಪ್ರದಾಯಿಕವಾದ ವರ್ಣನೆಗಳೂ ಸುಂದರವಾಗಿ ಕಾಣುತ್ತವೆ. ಅದನ್ನು ಅರಿತು ಅನುಭವಿಸಿ ಆನಂದಿಸಲು ತಾಳ್ಮೆಬೇಕು, ಶಕ್ತಿಬೇಕು" ಎಂದು ಡಾ. ಆರ್ ಸಿ. ಹಿರೇಮಠ ಮತ್ತು ಡಾ. ಎಮ್. ಎಸ್. ಸುಂಕಾಪುರರು ಷಡಕ್ಷರದೇವನ ಬಗ್ಗೆ ಹೇಳುವ ಮಾತುಗಳು ಸಂಗವಿಭುವಿಗೂ ಅನ್ವಯಿಸುತ್ತವೆಂದು ಹೇಳಬಹುದು. ಏಕೆಂದರೆ ಷಡಕ್ಷರದೇವನ ಮಾರ್ಗದಲ್ಲಿಯೇ ನಡೆದುಬಂದ ಕವಿ ಈತ.

ತನ್ನ ಮಹಾಕೃತಿಯ ಬಗ್ಗೆ ಅಭಿಮಾನದಿಂದ ಹೀಗೆ ಹೇಳಿಕೊಳ್ಳುತ್ತಾನೆ:

ಕಂಜಭವಾಂಡದಂತೆ ಮಧುಕಾಲ ರಸಾಲದ ಪಣ್ಣಿನಂತೆ ಸ
ತ್ಕುಂಜ ವಿಹಾರದಂತೆ ಮೃದುಕೋರಕಿತಸ್ಫುಟ ಚಾರುಮಲ್ಲಿಕಾ
ಮಂಜರಿಯಂತೆ ರಂಜಿಪ ಮಹಾಕೃತಿ ಸಂಗವಿಭು ಪ್ರಣೀತಮೋಂ
ಮಂಜು ರಸಾಂಚಿತಂ ರಸಿಕಮಾನಸಮೋದಮೊಡರ್ಚಿಪೆರ್ಚಲೀ

(ಕು. ವಿ. ಪ್ರಕರಣ ೧ ಪದ್ಯ ೨೫)

ಸಂಗವಿಭುವಿನ ಕೃತಿಕಾಂತೆ ಹೀಗಿದ್ದಾಳೆ:

ಮಲ್ಲಿಗೆ ಜೊಲ್ಲೆ ಬಟ್ಟಬಟುಬಲ್ಮೊಲೆಗಳ್ಗೆ ಮುಸುಂಕಿ ಮೇಲುದಂ
ಮೆಲ್ಲನೆ ಜಾರಿ ಸೇರಿಸಿ ಜಲಕ್ಕನೆ ಕಣ್ಗದಿರೋಸೆ ಸೂಸೆ ಮೇ
ಹೆಲ್ಲರ ಮೇಲೆ ಬಲ್ಪಿಡಿದ ನಾಟಕಿಯಂತೆ ರಸಜ್ಞರೊಪ್ಪಿನಿಂ
ಸಲ್ಲಲಿತಾರ್ಥ ಭಾವ ಪದಲಕ್ಷಣಗಳ್ ಕೃತಿಕಾಂತೆ ತೋರಿದಳ್

(ಕು. ವಿ. ಪ್ರಕರಣ ೧ ಪದ್ಯ ೪೬)

ಕಾವ್ಯದ ಪ್ರಾರಂಭಕ್ಕೇನೇ ಕವಿ ಹೊಸತನವನ್ನು ಮೆರೆಯುತ್ತಾನೆ:

ಶ್ರೀಮದ್ರಾಜಕಲಾಕಲಾಪಮದು ಭದ್ರೇಭಾಸ್ಯನಮ್ಮಯ್ಯ ನೀ
ನೀ ಮಾತಂ ತಿಳಿಪೆಂದು ನನ್ನ ನೊಳು ತಂದೀಡಾಡಿಯೆನಲ್ ಗೌರಿ ಬೇ
ಡೋ ಮಂದಾಕಿನಿಯಬ್ಜಪತ್ರಮದು ಬಾಗಲ್ ಚಂದ್ರನೆಂದೆಂಬಯೆಂ
ಬೀ ಮರ್ಮೋಕ್ತಿಗೆ ಮೆಚ್ಚಿ ನಕ್ಕ ಶಿವ ಸಲ್ಲಾಪಂ ಮುದಂ ಬೆರ್ಚಲೀ

(ಕು. ವಿ. ಪ್ರಕರಣ ೧ ಪದ್ಯ ೨)

ಈ ಶಿವಸುತ್ತಿಯಲ್ಲಿ ಅಡಗಿರುವ ಧ್ವನಿಯನ್ನು ಅರಿತು ಆನಂದಿಸಬೇಕು.

ಶಿವ-ಪಾರ್ವತಿಯರು ಕುಳಿತಿದ್ದಾರೆ. ವಿನಾಯಕ ಮೆಲ್ಲನೆ ಬಂದು ತಾಯಿಗೆ ಹೇಳುತ್ತಾನೆ. "ಏನಮ್ಮಾ, ಅಪ್ಪನಿಗೆ ಇಷ್ಟು ತಿಳಿಯಬಾರದೆ? ನನ್ನ ವೈರಿಯಾದ ಚಂದ್ರನನ್ನು ತಲೆಯಲ್ಲಿ ಧರಿಸುವುದೇ? ಅಪ್ಪನಿಗೆ ಇದನ್ನು ತಿಳಿಸು; ಆ ಚಂದ್ರ

೧ ರಾಜಶೇಖರವಿಳಾಸ – ಪ್ರಸ್ತಾವನೆ ಪು. ೪೫

ನನ್ನ ನನಗೆ ತಂದುಕೊಡು" ಎನ್ನುತ್ತಾನೆ. ಅದಕ್ಕೆ ಆಕೆ, "ಅದು ಚಂದ್ರನಲ್ಲವೊ, ದೇವಗಂಗೆಯಲ್ಲಿ ಅರಳಿದ ಕಮಲದೆಸಳು, ಬಾಗಿ ಚಂದ್ರನಂತೆ ಕಾಣುತ್ತಿದೆ" ಎಂದು ಹೇಳುವಳು. ಗೌರಿಯ ಈ ಅರ್ಥವತ್ತಾದ ಯುಕ್ತಿಯ ಮಾತನ್ನು ಕೇಳಿ ಶಿವನು ನಕ್ಕನು.

ಹೊಟ್ಟೆ ಬಿರಿಯುವಂತೆ ಹೂರಣಗಡಬು ಉಂಡು ಬರುವಾಗ ದಾರಿಯಲ್ಲಿ ಬಿದ್ದ ಗಣಪನನ್ನು ನೋಡಿ ನಕ್ಕವ ಚಂದ್ರ. ಬಿದ್ದಪೆಟ್ಟಿಗಿಂತ ನಕ್ಕ ಪೆಟ್ಟು ಹೆಚ್ಚಲ್ಲವೇ ? ಆ ವೈರದಿಂದ ವಿನಾಯಕನ ವರ್ತನೆ ಇಲ್ಲಿ ಹೀಗಾದುದು. ಇನ್ನೊಂದು ಧ್ವನಿಯು ಇಲ್ಲಿದೆ. ಗಂಗೆ ಗೌರಿಯ ಸವತಿ.

"ಬೇಡೋ ಮಂದಾಕಿನಿಯಬ್ಜಪತ್ರಮದು" ಎಂಬಲ್ಲಿ ಆಕೆಯ ಮಾತ್ಸರ್ಯವೂ ಕೂಡಿದೆ.

ಮಥನಕ್ಕೆಡೆಯಾದಂದಿನ
ವ್ಯಥೆಯಿಂ ಗಿರಿರಾಗರಕ್ತಿಕಡೆಗೇಡಾಡಲ್
ಪಥಗೊಂಡ ಮಾತ್ರಮಾದುವು
ಕಥನವು ರಕ್ತೋತ್ಪಲ ಪ್ರವಾಳಗಳರುಣಂ

( ಕು. ವಿ. ಪ್ರಕರಣ ೧ ಪದ್ಯ ೫೧ )

ಮೇಲಿನ ಪದ್ಯದಲ್ಲಿರುವ ಹವಳದ ವರ್ಣನೆ ನವೀನವಾಗಿದೆ.

ಕಾಳಿಗೆ ತಾಣಮಿತ್ತ ಗವಿಯೊಳ್ನಗರಾಜನೆನುತ್ತ ಭಾಸ್ಕರಂ
ತಾಳದೆ ತನ್ನ ಸಾವಿರ ಕರಂಗಳಲೊಯ್ಯನೆ ಪೊಯ್ಯಲುಷ್ಣದಿಂ
ಜಾಳಿಸಿ ಮೈಯೊಳೊಪ್ಪುವ ಬೆಮರ್ನೆರೆ ಸಾರುವ ನಿರ್ಝರಂಗಳಿಂ
ಬಾಳತೆವೆತ್ತು ಪೊನ್ನದರೆಯೊಳ್ಮರೆಯೊಳ್ಗಿರಿಯೊಳ್ವಿರಾಜಿಕುಂ

( ಕು. ವಿ. ಪ್ರಕರಣ ೧ ಪದ್ಯ ೬೩ )

ಈ ಗಿರಿ ನಿರ್ಝರದ ವರ್ಣನೆಯಲ್ಲಿ ಉತ್ಪ್ರೇಕ್ಷೆ ಬಹು ಭವ್ಯವಾಗಿದೆ; ಚಿತ್ರವತ್ತಾಗಿದೆ.

ಮರುದುದ್ವೇಗ ನಿರೋಧಮೈಸಿ ಘನಚಿದ್ಬ್ರಹ್ಮಾವಕಾಶ ಪ್ರಭಾ
ಕರಮಂ ಪೊರ್ದಿ ವಿದೇಹಭಾವದನುವಂ ಕೈಕೊಂಡು ಸೂಕ್ಷ್ಮಾಂಶಮಂ
ಬೆರಸಲ್ಕಾರಣದಲ್ಲಿ ದೃಶ್ಯಮಿದು ಸಂಭೂತಾಂಶ ಭೂತ್ಯಾಂಶಮಾ
ದುರು ಚಾರಿತ್ರವ ತೋರಿ ದಕ್ಷತನು ಸಂಭೂತತ್ವಮಂ ಮಾಜಲೂ

( ಕು. ವಿ. ಪ್ರಕರಣ ೨ ಪದ್ಯ ೫೨ )

ಅರ್ಥಸಂಪತ್ತಿಯಿಂದ, ತತ್ವಸಂಪತ್ತಿಯಿಂದ ಕೂಡಿದ ಬಹು ಸುಂದರವಾದ ಪದ್ಯವಿದು. ಗಿರಿಜೆ ಬೆಂಕಿಯಲ್ಲಿ ಬಿದ್ದು ದೇಹಬಿಟ್ಟುದನ್ನು ಕವಿ ಇಲ್ಲಿ ಧ್ವನಿಪೂರ್ಣವಾಗಿ ಹೇಳಿದ್ದಾನೆ. ಆಕೆ ದಕ್ಷತನುಸಂಭೂತತ್ವವನ್ನು ಮಾಜಿದಳು, ಅಷ್ಟೆ. ಬೆಂಕಿಯಲ್ಲಿ— ಅದು ದಕ್ಷನದೇ ಬೆಂಕಿಯಲ್ಲಿ— ಆ ತನು ಉರಿದು ಹೋಯಿತು. ಆಕೆ ಚಿನ್ಮಯಿ, ಅಮರೆ. ಆಕೆಗೆ ಸಾವೆಲ್ಲಿ ? "ಸಂಭೂತಾಂಶ ಭೂತ್ಯಾಂಶಮಾದುರು

ಚಾರಿತ್ರ" ಎನ್ನುವಲ್ಲಿಯ ಧ್ವನಿ, ಅರ್ಥ ಕವಿಯ ಅಸಾಧಾರಣ ಪ್ರತಿಭೆಯನ್ನು ಸಾರುತ್ತವೆ. ಮಹೋನ್ನತಿ ಪೈವೆತ್ತ ಇಂಥ ಸಾಲುಗಳು ಕುಮಾರವಿಜಯದ ತುಂಬ ದೊರಕುತ್ತವೆ. ಕಾವ್ಯಸೌಂದರ್ಯ, ತತ್ವಸೌಂದರ್ಯಗಳನ್ನು ಬೆರಿಸಿ ಸೊಗಸು ಇಮ್ಮಡಿಸುವಂತೆ ಹೇಳುವ ಕಲೆ ಸಂಗವಿಭುವಿಗೆ ಕರಗತವಾಗಿದೆ.

ಯಾಜಕ ಪಟ್ಟಮಂ ಮುಳಿಸಿಗಿತ್ತು ಪಶುತ್ವಮನೈಸಿ ದಕ್ಷನಿಂ
ಗಾಜಿ ಸಮಾಪ್ತಿಕಾರ್ಯಮಸಿಗೊಪ್ಪಿಸಿ ಮಂತ್ರಕಲಾಪಮಂ ಧನು
ರ್ಜಾಜಗದೇಕ ನಿಷ್ಠುರರವಕ್ಕುರೆಕೊಟ್ಟು ಮಹೋತ್ಸವಂ ಸಮು
ದ್ಭ್ರಾಜಿದುಮಾ ಸಮರ್ಪಣಮೆನುತ್ತೆ ವಿರಾಜಿಪನಲ್ಲಿ ಭದ್ರನೂ
( ಕು. ವಿ. ಅ. ೨ ಪದ್ಯ ೬೦ )

ಅತಿ ನವೀನ ಭಾವಗಳಿಲ್ಲಿ ಅರಳಿವೆ. ಕವಿಯ ಭಾವನಾವಿಲಾಸ, ಪ್ರತಿಭೆ, ಅರ್ಥ ಗೌರವ, ಧ್ವನಿ ಯಾವ ದೃಷ್ಟಿಯಿಂದ ನೋಡಿದರೂ ಶ್ರೇಷ್ಠ ಪದ್ಯವಿದು. ಇಂಥ ಪದ್ಯಗಳು ಸಾಹಿತ್ಯದಲ್ಲಿ ವಿರಳ.

ವೀರಭದ್ರ ದಕ್ಷಯಾಗವನ್ನು ಧ್ವಂಸಗೈಯಲು ಬಂದ. ಆದರೆ ಅದನ್ನು ಧ್ವಂಸಗೈದುದು ಹೇಗೆ ? ಯಾಜಕ ಪಟ್ಟವನ್ನು ತನ್ನ ಮುಳಿಸಿಗೆ ಇತ್ತನಂತೆ; ದಕ್ಷನಿಗೆ ಪಶುತ್ವ ಕೊಟ್ಟ. ( ಅವನಿಗೆ ಅದೇ ಯೋಗ್ಯವಲ್ಲವೇ ? ಏಕೆಂದರೆ ಪಶುಪತಿಗೆ ವಿರೋಧಿಯಾಗಿದ್ದನವ. ) ಆಜಿ ಸಮಾಪ್ತಿಕಾರ್ಯ ಖಡ್ಗಕ್ಕೆ ಒಪ್ಪಿಸಿದ. ಮಂತ್ರ ಹೇಳುವುದನ್ನು ಬಿಲ್ಲಿನ ಠಂಕಾರಕ್ಕೊಪ್ಪಿಸಿದ. 'ಈ ಮಹೋತ್ಸವವನ್ನು ಉಮೆಗೆ ಸಮರ್ಪಿಸಿದ' ಎಂಬಲ್ಲಿಯ ಧ್ವನಿ ಕವಿಯ ಪ್ರತಿಭೆಯ ಔನ್ನತ್ಯವನ್ನು ತೋರಿಸುತ್ತದೆ.

ಬೊಮ್ಮಂ ಪಾರ್ವತಿಜನ್ಮಮೈಸುತಿರೆ ಕನ್ಯಾರಾಸಿಗಂದೇ ಗುರು
ತ್ವಂ ಮುಂಕೊಂಡು ಮಹತ್ಸ್ವ ರೂಪಕಣುಭಾವಂ ಬೆರ್ಚಿತಂತೆಂದು ಮ
ತ್ತೊಮ್ಮೀ ನಾರಿಗ ದಿಟ್ಟಿಗೈದ ಬಳಿಕಿನ್ನೇನಾಪುದೋ ತೋರದೆಂ
ದುಂ ಮಧ್ಯಂ ಭಯಮಾಂತು ಚಿಂತೆಯಲ್ಲಿ ಸಣ್ಣಾಗಲ್ಕೆ ಪಕ್ಕಾದುದೋ
( ಕು. ವಿ. ಪ್ರಕರಣ ೨ ಪದ್ಯ ೧೧೮ )

ಮಹಾತಾಯಿ ಪಾರ್ವತಿ ಅಣುರೂಪ ಧರಿಸಿತು. ಆಗ 'ಮಹತ್ತೆಲ್ಲ' ಅಣು ರೂಪ ಧಾರಣ ಮಾಡಿತು. ಈಗಾಗಲೇ ನಾನು (ಆಕಾಶ) ಅಣುವಾಗಿ ಕಟಿಯಾಗಿದ್ದೇನೆ. ಬೊಮ್ಮ ಈ ನಾರಿಗೆ ಕಣ್ ಮೂಡಿಸಿದ ಬಳಿಕ ಇನ್ನೇನು ಗತಿಯೋ ಎಂಬ ಚಿಂತೆಯಿಂದ ನಡು ಸಣ್ಣಾಗತೊಡಗಿತು. ಇಲ್ಲಿಯ ಭಾವ, ಸೂಕ್ಷ್ಮ, ಧ್ವನಿಗಳನ್ನು ಅರಿತಷ್ಟೂ ಸುಖವೆನಿಸುತ್ತದೆ.

ಅರಿಯೆನಿಸಿಕೊಂಬುದತಿ ದು
ಸ್ತರಮಿರಲಿನ್ನೆಂತು ಪಡೆವೆ ಸುಹೃದಮಲ ಪದಂ
ಧರೆಯೊಳಗೆನುತ ಸುದರ್ಶನ
ಮುರುತರ ತರಳಾತ್ತ ವಜ್ರಮೆನಿಸಿತು ಶಿವನಾ
( ಕು. ವಿ. ಪ್ರಕರಣ ೪ ಪದ್ಯ ೧೮೭ )

ಹರಿಯಲ್ಲಿ ಅರಿ ( ಚಕ್ರ ) ಯಾದದ್ದು ಶಿವನಲ್ಲಿ ಸುದರ್ಶನವಾಯಿತು. "ಸುಹೃದಮಲಪದ ಇನ್ನೆಂತು ಪಡೆವೆ" ಎಂದು ಚಕ್ರ ಚಿಂತಿಸುತ್ತಿತ್ತು. ಶಿವನು ತನ್ನ ಹೃದಯದ ಮೇಲೆ ಅದನ್ನು ಧರಿಸಿದ. ಸುಹೃದಮಲಪದ ದೊರಕಿತು; ಸುದರ್ಶನವೆನಿಸಿತು.

ಶಿವನು ಮದುಮಗನಾಗಿ ಹಸೆಯ ಮೇಲೆ ಕುಳಿತಾಗಿನ ವರ್ಣನೆಯಿದು. ಆತ ಎದೆಯ ಮೇಲೆ ಧರಿಸಿದ ಹಾರದ ಮಧ್ಯದಲ್ಲಿ ಚಕ್ರಾಕಾರದ ಮಣಿಯಿತ್ತು. ಅದನ್ನು ಕವಿ ವರ್ಣಿಸಿದ ರೀತಿ ಹೊಚ್ಚ ಹೊಸದು. ಆತನ ಸೂಕ್ಷ್ಮಮತಿಗೆ, ತೀಕ್ಷ್ಣವಾದ ಪ್ರತಿಭೆಗೆ ಈ ಪದ್ಯ ಸಾಕ್ಷಿಯಾಗಿದೆ.

ಕುಮಾರ ವಿಜಯದ ಬಗೆಗೆ ಮಹಾಕವಿ ಡಾ. ದ. ರಾ. ಬೇಂದ್ರೆಯವರು ಹೇಳುವ ಮಾತು ಮನನೀಯವಾಗಿದೆ: "ಸಂಗವಿಭುವಿನ ಕುಮಾರ ವಿಜಯವು ಕನ್ನಡ ಪ್ರತಿಭೆಯ ನೂತನಾವಿಷ್ಕಾರವೆಂದು ಪ್ರಕಟವಾದಾಗ ರಸಿಕರು ಮೆಚ್ಚುವರೆಂಬಲ್ಲಿ ಯಾವ ಸಂಶಯವೂ ಇಲ್ಲ."೧

ನಮ್ಮ ದುರ್ದೈವ. ಕುಮಾರ ವಿಜಯವನ್ನು ಕವಿ ಪೂರ್ತಿಗೊಳಿಸಿಲ್ಲ; ಐದು ಪ್ರಕರಣಗಳನ್ನು ಬರೆದು ತನ್ನ ಜೀವನ ಮುಗಿಸಿದ್ದಾನೆ. ಕುಮಾರನಿಗೆ ಸೇನಾಪತಿ ಪಟ್ಟವನ್ನು ಕಟ್ಟುವವರೆಗೆ ಕಥೆ ಬಂದಿದೆ.

## ಶತಕಗಳು

ಶತಕಸಾಹಿತ್ಯ ಬಹುಪುರಾತನ ಸಾಹಿತ್ಯ. ಕನ್ನಡದಲ್ಲಿ ಮಹಾಕವಿಗಳು ಶತಕಗಳನ್ನು ಬರೆದು ಈ ಸಾಹಿತ್ಯಕ್ಕೆ ಮೆರುಗುಕೊಟ್ಟಿದ್ದಾರೆ. ಹರಿಹರ, ಮೊಗ್ಗೆಯ ಮಾಯಿದೇವ, ಸೋಮನಾಥ, ರತ್ನಾಕರವರ್ಣಿ ಮುಂತಾದ ಶ್ರೇಷ್ಠ ಶತಕ ಕೃತ್ಕರ್ತೃಗಳ ಸಾಲಿನಲ್ಲಿ ಬರುತ್ತಾನೆ—ಸಂಗವಿಭು. "ಶತಕ ಸಾಹಿತ್ಯವು ಕ್ರಿ. ಶ. ೧೯ ನೆಯ ಶತಮಾನದಲ್ಲಿ ಒಬ್ಬ ಚಂಪೂಕಾರನ ಕೃಪಾದೃಷ್ಟಿಗೆ. ಪಾತ್ರವಾಗಿದ್ದುದು ಕನ್ನಡ ಸಾಹಿತ್ಯ ಸಂಸ್ಕೃತಿಯ ಜೀವಂತಿಕೆಯ ಕುರುಹು. ಬೆಳಕಿಗೆ ಬಾರದ ಇನ್ನೂ ಹಲವಾರು ಕೃತಿಗಳು ಪ್ರಕಾಶಗೊಂಡಾಗ ಈ ಪುಷ್ಟಿಯ ವೀರ್ಯವತ್ತರತೆಗೆ ಹೊಸ ಅರ್ಥ ಮೂಡುತ್ತದೆ" ಎಂಬ ಮಹಾಕವಿ ಡಾ. ದ. ರಾ. ಬೇಂದ್ರೆಯವರ ಮಾತು ಬಹಳ ಅರ್ಥ ಪೂರ್ಣವಾಗಿದೆ. ೨

---

೧ ಬಸವ ಶತಕವನ್ನು ಕುರಿತು ಡಾ. ಬೇಂದ್ರೆಯವರು ಕಳಿಸಿದ ಅಭಿಪ್ರಾಯದಿಂದ ಎತ್ತಿಕೊಂಡಿದೆ. ( ಈ ಮೊದಲು ಬಸವ ಶತಕ ೧೯೬೮ ರಲ್ಲಿ ಧಾರವಾಡದ ಶ್ರೀ ಮುರುಘಾಮಠದಿಂದ ಪ್ರಕಟವಾಗಿದೆ. )

೨ ಅದೇ ಅಭಿಪ್ರಾಯದಿಂದ ಉದ್ಧರಿಸಿದೆ.

ಸಂಗವಿಭುವಿನ ಶತಕಗಳಲ್ಲಿ ಕಾಣುವ ಮುಖ್ಯಗುಣವೆಂದರೆ ದೈನ್ಯತೆ, ಭಕ್ತಿ. ಲೋಕನೀತಿಗೂ ಇಲ್ಲಿ ಕೊರತೆಯಿಲ್ಲ. ಆದರೆ ಅದಕ್ಕೆ ಮುಖ್ಯ ಸ್ಥಾನವಿಲ್ಲ. ಶತಕಗಳನ್ನು "ಕಾವ್ಯವಾಗಿಸಿದ" ಕೀರ್ತಿ ಮೊದಲಿಗೆ ಹರಿಹರ ಮಹಾಕವಿಗೆ ಸಲ್ಲಬೇಕು. ಮೊಗ್ಗೆಯ ಮಾಯಿದೇವ, ರತ್ನಾಕರವರ್ಣಿ ಅವರೂ ಶತಕಕ್ಕೆ 'ಕಾವ್ಯ' ದ ಜೀವ ವಿತ್ತರು. ಈ ನಿಟ್ಟಿನಲ್ಲಿ ಸಂಗವಿಭುವಿನ ಸ್ಥಾನ ಉನ್ನತವಾಗಿದೆ. ಶುಷ್ಕನೀತಿ ಇಲ್ಲಿಲ್ಲ; ಜೀವಂತ ನೀತಿಯಿದೆ. ಇಲ್ಲಿ ಸ್ತೋತ್ರವಿದೆ, ದೈನ್ಯತೆಯಿದೆ; ಆದರೆ ಅದು ನೀರಸವಾಗಿಲ್ಲ. ಆತನ ಗಮನವೆಲ್ಲ 'ಕಾವ್ಯದ' ಕಡೆಗಿದೆ. ಏನು ಹೇಳಿದರೂ ರಸವತ್ತಾಗಿ ಹೇಳಬೇಕು; ಧ್ವನಿಪೂರ್ಣವಾಗಿ ಹೇಳಬೇಕು ಎಂಬುದು ಆತನ ಇಚ್ಛೆ. ಈ ಇಚ್ಛೆಯಲ್ಲಿ ಆತ ಸಂಪೂರ್ಣ ಸಫಲನಾಗಿದ್ದಾನೆ.

ಚಮತ್ಕಾರ, ಉತ್ಪ್ರೇಕ್ಷೆ, ಉಕ್ತಿವೈಚಿತ್ರ್ಯಗಳೂ ಈ ಶತಕಗಳಲ್ಲಿ ಇವೆ. ಆದರೆ ಅವು 'ಕಾವ್ಯ'ವನ್ನು ಕೆಡಿಸಿಲ್ಲ. ಭುವನೈಕನಾಯಕೀ ಶತಕದಲ್ಲಿ ಚಮತ್ಕಾರ, ಉತ್ಪ್ರೇಕ್ಷೆ ಇನ್ನೆರಡು ಶತಕಗಳಿಗಿಂತಲೂ ತುಸು ಹೆಚ್ಚಾಗಿವೆಯೆಂದೇ ಹೇಳಬೇಕು. ಬಸವ ಶತಕ ಮತ್ತು ಪಂಪಾ ಶತಕಗಳಲ್ಲಿ ಭಕ್ತಿಯ ಪರಾಕಾಷ್ಠತೆ ಇದೆ.

## ಬಸವಶತಕ

ಕವಿಯು ಬಸವಶತಕವನ್ನು ಬರೆಯಲು ಕಾರಣವಾದ ಘಟನೆಯೊಂದನ್ನು ಜನರು ಹೇಳುತ್ತಾರೆ. ಅದು ಹೀಗಿದೆ :

ಕವಿಯು ಒಮ್ಮೆ ದೇವಸೂಗೂರಿಗೆ[೧] ಹೋಗಿದ್ದ. ದೇವಸೂಗೂರು ಕಣೇಕಲ್ ಸಂಸ್ಥಾನಕ್ಕೆ ಸೇರಿತ್ತು. ಅಲ್ಲಿ ಪುರಾತನವಾದ ವೀರಭದ್ರೇಶ್ವರ ದೇವಾಲಯವಿದೆ. ವೀರಭದ್ರನಿಗೆ ಸೂಗೂರೇಶನೆಂದು ಹೆಸರು. ಅರ್ಚಕರು ದೊರೆ ಬಂದುದಕ್ಕಾಗಿ ಮಂಗಳಾರತಿ ಮಾಡಿದರು. ಕವಿಯ ದೃಷ್ಟಿ ವೀರಭದ್ರನ ಸೊಂಟದಲ್ಲಿರುವ ವಜ್ರದ ಹಿಡಿಯ ಕಿರುಗತ್ತಿಯ ಮೇಲೆ ಬಿತ್ತು. "ಇದು ಈತನಿಗೇಕೆ ? ರಾಜ್ಯವಾಳುವ ನಮ್ಮಂಥವರಿಗೆ ಸರಿ. ಅದನ್ನಿಲ್ಲಿ ಕೊಡಿರಿ" ಎಂದು ಕೇಳಿದ. ಅರ್ಚಕರು ಹೆದರಿ ಮೌನವಾಂತು ನಿಂತು ಬಿಟ್ಟರು. ಕವಿಯು ಮುಂದೆ ಹೋಗಿ ತಾನೇ ತನ್ನ ಕೈಯಿಂದ ವೀರಭದ್ರನ ಸೊಂಟದ ಕಿರುಗತ್ತಿಯನ್ನು ಕಿತ್ತುಕೊಂಡು, ತನ್ನ ಸೊಂಟದಲ್ಲಿಟ್ಟುಕೊಂಡು ಅತ್ಯ್ವರಥನಾಗಿ ಗಣೇಕಲ್ಲಿಗೆ ಬಂದ. ಅಂದು ರಾತ್ರಿ ಹೊಟ್ಟೆ ನೋವು ಪ್ರಾರಂಭವಾಯಿತು. ಆಶ್ಚರ್ಯದ ಮಾತೆಂದರೆ ಕಿರುಗತ್ತಿಯಿಟ್ಟುಕೊಂಡ ಭಾಗದಲ್ಲಿ ವಿಪರೀತ ನೋವು. ಕತ್ತಿಮೊನೆಯಿಂದ ಚುಚ್ಚಿದಂಥ ನೋವು! ನೋವು ಸಹಿಸದೆ ಕವಿ ಒದ್ದಾಡಿದ. ರಾಜವೈದ್ಯರು ಬಂದರು. ಯಾವ ಔಷಧೋಪಚಾರಕ್ಕೂ

೧ ಈಗ ರಾಯಚೂರು ತಾಲೂಕಿನಲ್ಲಿ ಕೃಷ್ಣಾನದಿ ದಂಡೆಯಲ್ಲಿದೆ.

ನೋವು ಮಣಿಯಲಿಲ್ಲ. ಮಂತ್ರವಾಯಿತು, ಮಾಟವಾಯಿತು, ವೀರಭದ್ರನಲ್ಲಿ ಕ್ಷಮೆ ಕೇಳಿದ್ದಾಯಿತು. ಕುಲದೈವವಾದ ಪಂಪಾಪತಿಗೆ ಮೊರೆಹೊಕ್ಕಾಯಿತು. ನೋವು ಹೋಗಲಿಲ್ಲ. ಮೂರು ನಾಲ್ಕು ದಿನಗಳು ಕಳೆದುವು. ಕವಿ ಸೋತು ಸೊರಗಿ ಸಣ್ಣಾದ. ಥಟ್ಟನೆ ಏನೋ ಹೊಳೆಯಿತು. "ಬಸವಾ, ಶರಣಾಗತ ವಜ್ರ ಪಂಜರಾ" ಎಂದ. ನೋವಿನ ಮಧ್ಯದಲ್ಲಿಯೇ ಹೃದಯ ತಂಪನ್ನನುಭವಿಸಿತು ! ಯಾವುದೋ ನೆಮ್ಮದಿ ಮನಸ್ಕಿಳಿಯಿತು. ಸರಿ. ಕವಿ ನೋವನ್ನು ಮರೆತ. ಬಸವ ಸ್ತುತಿಗೈಯಲಾರಂಭಿಸಿದ. ನೂರು ಪದ್ಯ ಮುಗಿಯುವುದರೊಳಗಾಗಿ ಆತನ ನೋವು ನಲುಮೆಯಾಗಿತ್ತು; ಹೊಟ್ಟೆಬೇನೆ ಮಾಯವಾಗಿತ್ತು.

ಶತಕರಚನೆಗೆ ಕಾರಣವಾದ ಈ ಘಟನೆ ಕಾವ್ಯದಲ್ಲಿ ಎಲ್ಲಿಯೂ ವರ್ಣಿತ ವಾಗಿಲ್ಲ. ಆದರೆ ಕವಿಯು ತನ್ನ ಜೀವನದಲ್ಲಿ ಪಟ್ಟ ಯಾತನೆ, ಅನುಭವಿಸಿದ ಕಷ್ಟಗಳು ಕಾವ್ಯದಲ್ಲಿ ಮೂಡಿವೆ. ದೀನನಾಗಿ ಕರುಳು ಕರಗುವಂತೆ ಆತ ಬಸವನನ್ನು ಸ್ತುತಿಸುತ್ತಾನೆ.

ಕನ್ನಡ ಸಾಹಿತ್ಯದಲ್ಲಿ ಈ ಕವಿಗೆ ಮೊದಲು ಬಸವಶತಕವನ್ನು ಬರೆದವರು ಮೂರು ಜನ ಕವಿಗಳು :

ಗುರುಬಸವ (೧೪೩೦) : ವೃಷಭಗೀತೆ ಭೋಗಷಟ್ಪದಿಯಲ್ಲಿದೆ.
ಸಿದ್ಧನಂಜೇಶ (೧೬೫೦) : ಈತನ ಬಸವಶತಕ ಉಪಲಬ್ಧವಿಲ್ಲ.
ಯೋಗಾನಂದ (೧೭೫೦) : ಬಸವಶತಕ ಸಾಂಗತ್ಯದಲ್ಲಿದೆ.

ಸಂಗವಿಭುವಿನ ಬಸವಶತಕ ಬಸವಶತಕಗಳಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನ ಗಳಿಸಿದೆ. ಇದರಲ್ಲಿ ಇತಿಹಾಸವಿದೆ, ಪವಾಡಗಳಿವೆ, ಸಾಮಾನ್ಯ ನೀತಿಯಿದೆ, ಸಮಕಾಲಿನ ಪರಸ್ಥಿತಿ ಇದೆ, ಬಸವಣ್ಣನವರ ಸ್ಫುಟವಾದ ಚಿತ್ರವಿದೆ.

## ಪವಾಡಗಳು

ಬಸವಣ್ಣನವರು ನಿತ್ಯ ಮೂನ್ನೂರಾ ಅರವತ್ತು ಪವಾಡಗಳನ್ನು ಮೆರೆ ಯುತ್ತಿದ್ದರೆಂದು ಕವಿ ಹೇಳುತ್ತಾನೆ. ಈ ಶತಕದಲ್ಲಿ ಬಂದಿರುವ ಪವಾಡಗಳು ಇವು :

೧. ಬಿಜ್ಜಳನ ಅರಸಿಯರನ್ನು ಜಂಗಮರನ್ನಾಗಿ ಮಾಡಿದ್ದು.
೨. ಸತ್ತ ಜೈನನೊಬ್ಬನಿಗೆ ಪ್ರಾಣದಾನ ಮಾಡಿದ್ದು.
೩. ಅರಮನೆಯ ಗೋಡೆಯ ಮೇಲಿನ ಜಂಗಮರ ಚಿತ್ರಗಳನ್ನು ಜೀವಂತ ಚರಮೂರ್ತಿಗಳನ್ನಾಗಿ ಮಾಡಿದ್ದು.
೪. ಸತ್ತ ಹಾವನ್ನು ಬದುಕಿಸಿದ್ದು.
೫. ಉಂಗುರವನ್ನು ತೆಗೆದು ವಂದಿಸಿ ಸಿಂಹಾಸನದ ಮೇಲಿನ ಧಾನ್ಯವನ್ನು ಸುಟ್ಟುದು.

೬. ಲಿಂಬೆಯನ್ನು ಲಿಂಗವನ್ನಾಗಿ ಮಾಡಿದ್ದು.
೭. ಜಂಗಮ ವೇಷದ ಕಿಟ್ಟದ ಗೊಂಬೆಗೆ ಪ್ರಾಣ ನೀಡಿದ್ದು.
೮. ಬಾಲ್ಯದಲ್ಲಿ ಬಾವಿಯಲ್ಲಿ ಬಿದ್ದು ಸತ್ತ ಬಾಲಕನನ್ನು ಬದುಕಿಸಿದ್ದು.
೯. ನಾರಿಯೊಬ್ಬಳು ಸೂರ್ಯನನ್ನು ಮುಳುಗದಂತೆ ತಡೆದದ್ದು.
೧೦. ತೊಗರಿಯನ್ನು ರತ್ನ ಮಾಡಿದ್ದು.
೧೧. ಬ್ರಾಹ್ಮಣನೊಬ್ಬನ ಸತ್ತ ಆಕಳನ್ನು ಬದುಕಿಸಿದ್ದು.
೧೨. ಗೊಲ್ಲತಿಯ ಕೈ ಹಿಡಿದು ರಕ್ಷಿಸಿದ್ದು.

ಇವುಗಳಲ್ಲಿ ಎರಡನೆಯ, ಒಂಬತ್ತನೆಯ ಮತ್ತು ಹನ್ನೊಂದನೆಯ ಪವಾಡಗಳು ಬಸವಪುರಾಣ, ಶರಣಲೀಲಾಮೃತ, ಸಿಂಗಿರಾಜಪುರಾಣ, ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ ಮತ್ತು ಬಸವಪವಾಡ ಈ ಗ್ರಂಥಗಳಲ್ಲಿಲ್ಲ.

ನಾರಿಯು ಸೂರ್ಯನನ್ನು ತಡೆದು ನಿಲ್ಲಿಸಿದ ಪವಾಡವನ್ನು ಕವಿಯು ಬಹು ರಮ್ಯವಾಗಿ ವರ್ಣಿಸಿದ್ದಾನೆ :

ಊರೊಳಗೊಬ್ಬವಳ್ತಲೆಯ ಕೂದಲನಾರಿಸುತಿರ್ದು ಸೂರನಂ
ಸಾರದಿರೆನ್ನಲೊಮ್ಮೆಯಪರಾಂಬುಧಿಯಂ ನೆರೆ ಕೇಳದಾದಡಾ
ಸಾರಸಮಿತ್ರನಂ ತಡೆಯಲೀಂ ಭವದಂಘ್ರಿಗಳಾಣೆಯಿಂ ಧರಾ
ಧಾರ ಮಹಾನುಭಾವಶರಣಾ ಶರಣಾಗತವಜ್ರಪಂಜರಾ

(ಬಸವಶತಕ ಪದ್ಯ ೨೦)

## ಚಾರಿತ್ರಿಕ ಅಂಶಗಳು

ಬಸವಣ್ಣನವರ ಜೀವನಕ್ಕೆ ಸಂಬಂಧಿಸಿದ ಘಟನೆಗಳು ಈ ಕಾವ್ಯದಲ್ಲಿ ಬಂದಿವೆ. ಬಸವಣ್ಣನವರ ಬಹಿರಂಗ ಮತ್ತು ಅಂತರಂಗದ ಜೀವನವನ್ನು ಕವಿ ಬಹು ಸೊಗಸಾಗಿ ಚಿತ್ರಿಸುತ್ತಾನೆ. ಅಲ್ಲಮ ಮತ್ತು ಬಸವರ ಸಂಬಂಧ ಬಹು ಸೂಕ್ಷ್ಮವಾಗಿ, ಸಾರವತ್ತಾಗಿ ಕವಿ ವರ್ಣಿಸಿದ್ದಾನೆ. ಇದರಲ್ಲಿ ಬರುವ ಚಾರಿತ್ರಿಕ ಅಂಶಗಳನ್ನು ಮನಗಂಡರೆ ಕವಿ ತನ್ನ ಕಾಲದವರೆಗಿನ ಎಲ್ಲ ವೀರಶೈವಧರ್ಮ ಗ್ರಂಥಗಳನ್ನು ಅಭ್ಯಾಸ ಮಾಡಿದ್ದನೆಂಬುದು ತಿಳಿಯುತ್ತದೆ. ಸಿದ್ಧರಾಮನಿಗೆ ಬಸವಣ್ಣನೇ ಇಷ್ಟಲಿಂಗವನ್ನು ಕೊಟ್ಟನೆಂಬಂತೆ ಕವಿ ಹೇಳುತ್ತಾನೆ. ಆ ಭಾವ ಈ ಪದ್ಯದಲ್ಲಿದೆ.

ಹರನ ಪರಪ್ರಕೃಷ್ಟ ನವಲೀಲೆಯನೀ ನೆಲದಲ್ಲಿ ತೋರಬಂ
ದರಸದೆ ನಿಮ್ಮ ರೀತಿಯನು ಗುಡ್ಡರೊಳ[illegible]ಮ್ಮೆಯಲ್ಲಮಾ
ದರಣೆಯುಲ್ಲೆದಲಿಷ್ಟವನು ಕೊಟ್ಟು ಮ[illegible]ತ್ಮಯ ಸಿದ್ಧರಾಮನೊ
ಳ್ಪರೆಸಿದಿರೀವ ಭಾವಕರುಣಾ ಶರಣಾಗತ ವಜ್ರಪಂಜರಾ

(ಬ. ಶ. ಪದ್ಯ ೨೮)

ಕವಿಯು ಬಸವಣ್ಣನವರ ವಚನಗಳನ್ನು ಅಭ್ಯಾಸಮಾಡಿದ್ದನೆಂಬುದಕ್ಕೆ ಉದಾಹರಣೆ ಇಲ್ಲಿದೆ :

ನಟನ ಚರಿತ್ರಮಂ ಶಿವನೊಡಂಬಡಲೆಂದು ಮೃದಂಗವಾಹಕಂ
ಪಟುತರವೇತ್ರಧಾರಿ ನಿಜಪೀಠದೊಳೊಪ್ಪಲು ಗೋಪನಾದೆ ಪ
ರ್ಯಟನ ವಿನೋದದೊಳ್ಬಸವನಾದೆ ಗುಹೇಶ್ವರನಾಗಲಾತನು
ತ್ಕಟಮಹಿಮೋನ್ನತಕ್ಕೆ ಶರಣಾ ಶರಣಾಗತ ವಜ್ರಪಂಜರಾ

( ಬ. ಶ. ಪದ್ಯ ೮೩ )

ಈ ಪದ್ಯವನ್ನು ಈ ವಚನಗಳೊಡನೆ ಹೋಲಿಸಿ ನೋಡಬಹುದು.

೧ "ಅಯ್ಯಾ, ನೀನು ನಿರಾಕಾರವಾಗಿರ್ದಲ್ಲಿ
ನಾನು ಜ್ಞಾನವೆಂಬ ವಾಹನವಾಗಿರ್ದೆ, ಕಾಣಾ.
ಅಯ್ಯಾ, ನೀನು ನಾಟ್ಯಕ್ಕೆ ನಿಂದಲ್ಲಿ
ನಾನು ಚೈತನ್ಯನೆಂಬ ವಾಹನವಾಗಿರ್ದೆ, ಕಾಣಾ.
ಅಯ್ಯಾ, ನೀನು ಆಕಾರವಾಗಿರ್ದಲ್ಲಿ
ನಾನು ವೃಷಭನೆಂಬ ವಾಹನವಾಗಿರ್ದೆ, ಕಾಣಾ.
ಅಯ್ಯಾ, ನೀನೆನ್ನ ಭವವ ಕೊಂದಿಹೆನೆಂದು
ಜಂಗಮ ಲಾಂಛನವಾಗಿ ಬಂದೊಡೆ
ನಾನು ಭಕ್ತನೆಂಬ ವಾಹನವಾಗಿರ್ದೆ, ಕಾಣಾ
ಕೂಡಲ ಸಂಗಮದೇವಾ."

೨ "ಅಯ್ಯಾ, ಏಳೇಳು ಜನ್ಮದಲ್ಲಿ ಶಿವಭಕ್ತನಾಗಿ
ಬಾರದಿರ್ದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ
... ... ... ... ..."

## ಕವಿಯ ಮೊರೆ

ಕವಿಯು ಜೀವನದಲ್ಲಿ ಅನಂತ ರೀತಿಯ ಕಷ್ಟಗಳನ್ನನುಭವಿಸಿದ್ದಾನೆ. ನೋವಿನ ಇಕ್ಕಳದಲ್ಲಿ ಸಿಕ್ಕು ತತ್ತರಿಸಿದ್ದಾನೆ. ಸಂಸಾರದ ಬಾಧೆಗಳಲ್ಲಿ ಬೆಂದಿದ್ದಾನೆ. ಕೊನೆಗೆ ನೀನೇ ಶರಣು ಎಂದು ಸರ್ವಾರ್ಪಣಭಾವದಿಂದ ಬಸವನಿಗೆ ಮೊರೆಹೋಗಿದ್ದಾನೆ.

"ಗುಣಗಣಬಂಧಗಳ್ಬ್ಬರಿತ ಕೋಟಿಗಳೆನ್ನೊಳು ಕಂಡು ತನ್ನಿವಾ
ರಣಮೆಸಗುತೆ ಕಾಯ್ವಬಲವಿಲ್ಲದೆ ಕೈಬಿಡಲಾದರೆಲ್ಲರು"

ಆದುದರಿಂದ ಮಹಿಮಾತಿಶಯನೇ, ಕರುಣಾಬ್ಧಿಯೇ, ನಿನ್ನನ್ನು ಮೊರೆ ಹೊಕ್ಕೆನು—ಎನ್ನುತ್ತಾನೆ ಕವಿ. ಆತ ದುರುಳನರೇಶರಟ್ಟುಳಿಗೆ ದುರ್ಗಮ ಕಂಟಕ ತಾಪಕ್ಕಳ್ಕಿದ್ದಾನೆ; ಬಲ್ಸೊರಗಿದ್ದಾನೆ. ತಾಮಸ ಕೃತ್ಯದಿಂ ಪಾಮರನಾಗಿ ಶೈವ ಪದಮಂ ಮರೆದು ಪತಿತಾಗ್ರಗ್ರಾಮಣಿಯಾಗಿ, ಭೂಮಿಯಲ್ಲಿ ಯಾರೂ ಕಾಯ್ವರಿಲ್ಲದವ

೧ ಬಸವಣ್ಣನವರ ಷಟ್‌ಸ್ಥಳದ ವಚನಗಳು ( ಬಸವನಾಳ ಸಂಪಾದಿತ ) ವಚನ-೩
೨ ಅದೇ ವಚನ-೪

ನಾಗಿ "ನಿಮ್ಮ ಸಾರಿದೆನಿಕೋ ಬಸವಾ, ತಡವೇತಕೆನ್ನನುಂ ಕರುಣಿಸಿ ಕಾಯ್ವುದು" ಎಂದು ಬೇಡಿಕೊಳ್ಳುತ್ತಾನೆ. ಆತನಿಗೆ ಗೊತ್ತಿದೆ–ಬಸವನನ್ನುಳಿದು, ತನ್ನನ್ನಾರೂ ಉದ್ಧರಿಸರೆಂದು. 'ಎಡಬಲದಲ್ಲಿ ಬಾಡುವ ಪೈರುಗಳಿಂ ತೊರೆದೆಲ್ಲ ನೀರ್ಗಳಂ ಜಡನಿಧಿಗಿತ್ತ ಪಾಪಿನಿಯಂಪ್ರೋಲ್ತ ಜಡಾತ್ಮರ ಪೊಂದಲೇಕೆ ? ನೀಂ ಬಡವರ ಭಾಗ್ಯದಂತೆ ದೊರೆಯಲ್ಕೊರೆಪ್ರೊಕ್ಕೆ ಕೈಪಿಡಿದು ಕಾಪಾಡು" ಎಂದು ದೈನ್ಯದಿಂದ ಕೇಳುತ್ತಾನೆ.

"ಹೊಟ್ಟೆಯ ಕೂಳಿಗಾಗಿ ನರಪಾಲರ ಸೇವೆಯನೊಪ್ಪಿ ಸತ್ಪಥಂಬಿಟ್ಟು ಮನೋನುಸಾರವೆಡೆಯಾಡುವವನಾಗಿದ್ದೇನೆ. ಮನವು ದುರ್ವಿವಾದವನ್ನು ಬಿಡಲೊಲ್ಲದು; ತತ್ಕುಟಿಲ ನಾಟಕದಿಂದೆನ್ನನುಳಿಸು. ಸಕಲರೊಳಾನು ಮೂರ್ಖನು; ರಕ್ಷಿಪುದು, ರಕ್ಷಿಪುದು."

ನಾನು ಕಿಂಕರರ ಕಿಂಕರನು; ಲೆಂಕರ ಲೆಂಕನು; ದಾಸರ ದಾಸನು. ಈ ಮಂಕು ಮನುಷ್ಯನಲ್ಲಿ ಗುಣಾವಾರಿಸಿ ನೋಡದೆ ಕಾಯ್ವುದು. ತಂದೇ, ಕಾಯ್ವುದು.

ಪೆತ್ತರು ತಂದೆ-ತಾಯ್ಗಳು. ಉಪಚಾರವನೊಪ್ಪಿ ನೆಗಳ್ದರೆನ್ನ ಸಂಪತ್ತಿಗೆ ಯಾಸೆಪಟ್ಟು ........ ಪಾಲಿಸುವರೀ ಮತದಲ್ಲಿ ಅವರು. ಅವರ ಪಾಲನೆ ನನಗೆ ಬೇಡ. ನಿನ್ನ ಕರುಣೆ ಬೇಕು. ಸರ್ವೋತ್ತಮನೇ, ನನ್ನನ್ನು ರಕ್ಷಿಸು.

ಬಸವಾ, ಮೊದಲು ನನ್ನನ್ನುದ್ಧರಿಸು. ಆ ಬಳಿಕ ಬಿಜ್ಜಳನರೇಶ್ವರ ಪತ್ತನಪಾಲನೋನ್ನತಸ್ಥಾಪನ ಮುಖ್ಯ ಕಾರ್ಯಗಳನ್ನು ಮಾಡು. ಉಂಡುಣಬಂದವರಿಂದ ಮುಂಚೆ ಕ್ಷುತ್ತಾಪಿಗೆ ನೀಡು.

ವಿಷಯವರ್ಗಸಮೀರ ಭುಜಂಗ ಬಾ, ಕಲಿಮದೋತ್ಪಲಜಾಲ ಪತಂಗ ಬಾ, ಮಹಿತಮಂಗಳಕಾರ್ಯ ವಿಶಾಲ ಬಾ, ಸಕಲ ಸೇವಕ ಭಾವಿಕಪಾಲ ಬಾರೆಲಾ — ಎನ್ನ ಕಾಯ್ವ ಹರಣಾ.

ಸಂಗವಿಭು ತನ್ನ ಅಂತರಂಗವನ್ನು ತೆರೆದಿಟ್ಟಿದ್ದಾನೆ. ಆತನು ಆರ್ತನಾಗಿ, ದೀನನಾಗಿ, ಕುದಿವ ಕರುಳಿನಿಂದ ಉಕ್ಕುವ ಅಂತಃಕರಣದಿಂದ, ಎದೆಯ ನೋವಿನಿಂದ, ಹೃದಯದ ಮಾರ್ದವತೆಯಿಂದ ಕೂಗುತ್ತಾನೆ, ಕರೆಯುತ್ತಾನೆ, ಬೇಡುತ್ತಾನೆ, ಕಾಡುತ್ತಾನೆ. ಆತನ ಕೂಗುವಿಕೆಯಲ್ಲಿ, ಕರೆಯುವಿಕೆಯಲ್ಲಿ, ಬೇಡಿಕೆಯಲ್ಲಿ, ಕಾಡಿಕೆಯಲ್ಲಿ ನಾವೂ ಒಂದಾಗುತ್ತೇವೆ. ನಮ್ಮ ಅಂತರಂಗವನ್ನು ನಾವೇ ತೆರೆದು ನೋಡಿಕೊಂಡು, ನಮ್ಮ ದುರ್ಗುಣಗಳ ರಾಸಿಗಂಜಿ, "ನಿಮ್ಮ ಸಾರಿದೆನಿಕೋ ಬಸವಾ, ತಡವೇತಕೆನ್ನನುಂ ಕರುಣಿಸಿ ಕಾಯ್ವುದು" ಎಂಬ ಕವಿಯ ಧ್ವನಿಯಲ್ಲಿ ನಾವೂ ಧ್ವನಿಗೂಡಿಸಿ ಬಸವನಿಗೆ ಮೊರೆ ಹೋಗುತ್ತೇವೆ.

## ಬಸವಣ್ಣನವರ ವ್ಯಕ್ತಿತ್ವ

ಬಸವಶತಕದಲ್ಲಿ ಬಸವಣ್ಣನ ವ್ಯಕ್ತಿತ್ವ ಸುಂದರವಾಗಿ, ಸ್ಫುಟವಾಗಿ ಮೂಡಿ ಬಂದಿದೆ. ಕವಿಯು ಆತನನ್ನು ಹಲವು ನಿಟ್ಟಿನಿಂದ ಕಂಡಿದ್ದಾನೆ. ಬಸವಣ್ಣ ಲೌಕಿಕನೂ ಹೌದು, ಪಾರಲೌಕಿಕನೂ ಹೌದು, ಅಲೌಕಿಕನೂ ಹೌದು. ಬಸವನ ವ್ಯಕ್ತಿತ್ವದ ಈ ವೈಶಿಷ್ಟ್ಯಗಳಲ್ಲಿ ಕವಿಗೆ ಹೆಚ್ಚು ಸೇರಿದ್ದು ಆತನ ಲೌಕಿಕ ಗುಣ; ಮಾನವೀಯತೆ.

ಬಸವಣ್ಣ ನಿತ್ಯ ಮುನ್ನೂರರವತ್ತು ಪವಾಡಗಳ್ನು ಮೆರೆದುದು ಚೋದ್ಯಕ್ಕಲ್ಲ; ಜನರ ಉದ್ಧಾರಕ್ಕೆ. ಈ ಮಾತನ್ನು ಹಿನ್ನೆಲೆಯಾಗಿಟ್ಟುಕೊಂಡೇ ಕವಿ ಆತನ ಪವಾಡಗಳನ್ನು ಚಿತ್ರಿಸುತ್ತಾನೆ. ಬಸವಣ್ಣನ ದಯಾರ್ದ್ರ ಹೃದಯ, ದೀನದಲಿತರ ಬಗ್ಗೆ ಆತನಲ್ಲಿರುವ ಕಳಕಳಿ, ಸರ್ವ ಜೀವರಲ್ಲಿ ಅನುಕಂಪೆ– ಇವುಗಳನ್ನು ಕವಿ ಸಂಗವಿಭು ಮನಮುಟ್ಟುವಂತೆ ಹೇಳುತ್ತಾನೆ.

ಬಸವಣ್ಣನಿಗೆ ಕುಲ, ಜಾತಿ, ಮತ, ಪಂಥಗಳಿಲ್ಲ. ಆತನ ಹೃದಯ ಹಗಲಿರುಳೂ ಸಕಲ ಜೀವರಾಸಿಯ ಒಳಿತಿಗಾಗಿ ಮಿಡಿಯುತ್ತಿರುತ್ತದೆ. ಜೈನ ಗೃಹಸ್ಥನೊಬ್ಬನು ತನುವಿಟ್ಟನು. ಆತನ ಸತಿ ಬಂದು ಬಸವನ ಚೆನ್ನಡಿಗಳಿಗೆರಗಿದಳು. ಬಸವಣ್ಣ 'ಐದೆ' ಯಾಗೆಂದು ಹರಸಿದ. ಆಕೆಯ ಗಂಡ ಬದುಕಿದನೆಂದು ಬೇರೆ ಹೇಳಬೇಕಾಗಿಲ್ಲ. ಬ್ರಾಹ್ಮಣನೊಬ್ಬನ ಆಕಳು ಸತ್ತುಹೋಯಿತು. ಬ್ರಾಹ್ಮಣನ ಹೆಂಡತಿ ಸತ್ತ ಆಕಳಿಗಾಗಿ ಕಣ್ಣೀರು ಸುರಿಸಿದಳು. ಬಸವನ ಹೃದಯ ಕರಗಿತು. 'ಶಿವಾ' ಎಂದ. ಹಸುವು ಎದ್ದು ಹಾಲನ್ನು ಕೊಟ್ಟಿತು. ತನ್ನ ಬಾಲ್ಯದಲ್ಲಿ ಬಸವಣ್ಣ ಬಾವಿಯಲ್ಲಿ ಬಿದ್ದು ಸತ್ತ ಬಾಲಕನನ್ನು ಎತ್ತಿದ. ಈ ಘಟನೆಗಳಲ್ಲಿ ಕವಿಯ ದೃಷ್ಟಿಯಿರುವುದು ಬಸವಣ್ಣನಲ್ಲಿರುವ ಕರುಣೆಯ ಕಡೆಗೆ. 'ಯಾರ ನೋವಿದ್ದರೂ ಆತ ತನ್ನದೆಂದೇ ತಿಳಿವ; ಯಾರತ್ತರೂ ಆತನ ಕಣ್ಣು ತುಂಬಿಬರುವವು.' ಜಗದ ಸರ್ವಜೀವರ ನೋವಿಗಾಗಿ ಆತ ಮರುಗಿದ. ಮರುಗಿ ಸುಮ್ಮನೆ ಕೂಡಲಿಲ್ಲ. ಆ ನೋವನ್ನಳಿಸಲು ಸವೆಸವೆದು ಸಂಗನಿಗೆ ಪೂಜೆಯಾದ. ಈ ಧ್ವನಿಯು ಕವಿಯು ಚಿತ್ರಿಸಿರುವ ಪವಾಡಗಳಲ್ಲಡಗಿದೆ.

ಮೃತ್ಯು ಮುಟ್ಟಿದ ಬಳಿಕ ಮುಗಿಯಿತು–ಜೀವನದ ಕಥೆ. ಆದರೆ ಮಹಾತ್ಮರು ಮೃತ್ಯುವನ್ನೂ ಮೂದಲಿಸುತ್ತಾರೆ. ಬಸವಣ್ಣ 'ಮೃತ್ಯು ಮರ್ದನನು.' ಮೃತ್ಯು ಕೊಲ್ಲುವುದೊಂದೇ ಬಲ್ಲುದು. ಆದರೆ ಬಸವ ಬದುಕಿಸುವುದೊಂದೇ ಬಲ್ಲ. ಆತ ಸತ್ತವರನ್ನು ಎತ್ತಿದ್ದು ಈ ದೃಷ್ಟಿಯಿಂದ. ಈ ಘಟನೆಗಳು ನಮಗೆ ಪವಾಡ; ಬಸವಣ್ಣನಿಗೆ ಸಹಜ.

ಬಸವ ಶ್ರಿತಜನಕಲ್ಪಭೂಜ, ಶಿವಚಿತ್‌ಸುಖಸಾಗರಪೂರ್ಣರಾಜ, ಸನ್ನುತ ಗುಣ ಸತ್‌ಸಮಾಜ. ಎಲ್ಲಕ್ಕೂ ಹೆಚ್ಚಾಗಿ ಮರೆವೊಕ್ಕರ ಕಾಯ್ವ ವೃಷಾಧಿರಾಜ

ಆತ. ವಿಟನಿರಲಿ, ಸೂಳೆಯಿರಲಿ, ರಾಜನಿರಲಿ, ಭಿಕ್ಷುಕನಿರಲಿ, ಗೊಲ್ಲತಿಯಿರಲಿ, ಜಂಗಮನಿರಲಿ, ಪಾಪಿಯಿರಲಿ, ಕೋಪಿಯಿರಲಿ, ಸಿರಿವಂತನಿರಲಿ, ದರಿದ್ರನಿರಲಿ, ಪಶುವಿರಲಿ, ಪಕ್ಷಿಯಿರಲಿ–ಯಾರೇ ಇರಲಿ, ಮರೆಹೊಕ್ಕರನ್ನು ಕಾಯ್ವ ಬಿರುದುಳ್ಳಾತ ಆತ. ಅಂತೆಯೇ ಆತನಿಗೆ ಕವಿ "ಶರಣಾಗತವಜ್ರಪಂಜರ" ಎಂದು ಕರೆದಿದ್ದಾನೆ.

'ಭಕ್ತಿ ಸಾರೋದಯ ನಿಷ್ಠೆಯಿಂ ಬಳೆಸಿ, ದುರ್ಮತರಂ ಜರೆದು, ಏಕಮಾರ್ಗ ಸಂಪಾದನ ಭಾಗ್ಯವನ್ನು ನೆರವಲು ಬಸವಣ್ಣ ಮಾದಲಾಂಬೋದರಜಾತನಾದನು'. ಈ ಮಣಿಹವನ್ನು ಪೂರಯಿಸಲು 'ಶ್ರೀಗುರುಲಿಂಗ ಜಂಗಮ ಸಪರ್ಯ ಸಮಾಧಿ ವಿಶೇಷ ಸಾಧನೋದ್ಯೋಗ' ಕೈಕೊಳ್ಳುತ್ತಾನೆ. ಏಕಮಾರ್ಗಸಂಪಾದನಭಾಗ್ಯ ನೆರವಲು ಬಂದಾತ, ಗುರುಲಿಂಗಜಂಗಮ ಸೇವೆ ಕೈಕೊಂಡಾಗ ಸುಮ್ಮನೆ ಕುಳಿತರೆ ಆಗುತ್ತದೆಯೇ ? ಕಾಯಕ ಬೇಡವೇ ಜೀವಿಸಲು ? 'ಬಿಜ್ಜಳನಲ್ಲಿ ಸಚಿವತ್ವವಾಂತನು.' ತನ್ನ ಮಣಿಹವನ್ನೂ ಕಾಯಕವನ್ನೂ ಎರಡನ್ನೂ ಒಂದಾಗಿ ಸಾಗಿಸಿ, ಸಾಧಿಸಿದ ಧೀರ ಬಸವಣ್ಣ. ಇದನ್ನು ಕವಿ ಬಹು ಮನೋಹರವಾಗಿ ಹೇಳಿದ್ದಾನೆ :

ಪಗಲಿರುಳೆಚ್ಚ ಮೆಚ್ಚಿಗೆಯ ಪಟ್ಟ! ಗುಹೇಶ್ವರ ಲಿಂಗದಲ್ಲಿ
ಬೆಚ್ಚಗಲದೆ ರಾಜಮಾರ್ಗಗಳ ಸಾಧಿಸುತಂ ಸಚಿವತ್ವವಾಂತು ಮೇಣ್
ಜಗದ ಚರಪ್ರದಾಸ್ಯ ವಿಧಿಗೆಲ್ಲೆನಲಲ್ಲಿರಲೆಂತು ನಿಮ್ಮ ಸ
ರ್ವಗತ ಮಹಾತ್ಮೆಯಾತ್ಮ ಕರಣಾ ಶರಣಾಗತವಜ್ರಪಂಜರಾ

( ಬ. ಶ. ಪದ್ಯ ೭೬ )

ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು. ಮರ್ತ್ಯವೆಂಬುದು ಕರ್ತಾರನ ಕಮ್ಮಟ–ಎಂದು ಸಾರಿದ ಬಸವಣ್ಣನನ್ನು ಕವಿ ಚೆನ್ನಾಗಿ ಅರಿತಿದ್ದಾನೆ.

ಈ ಪ್ರಪಂಚ ಗುಣಮಯವೆಂದು ಗೋಣಗಲೇಕೆ ? ಗುಣವು ಪರವಲ್ಲವೆಂಬುದು ತಪ್ಪು–ಎಂದುಸುರಿ ಈ ಪ್ರಪಂಚದ ಮಹತ್ವ, ಈ ಬದುಕಿನ ಮಹತ್ವವನ್ನು ಸಾರುವ ಈ ಪದ್ಯ ಬಸವಣ್ಣನ ವ್ಯಕ್ತಿತ್ವಕ್ಕೆ ಕಳಸವಿಟ್ಟಂತಿದೆ.

ಗುಣಮಯಮೀ ಪ್ರಪಂಚಮೆನಲೇಕೆ ಗುಣಂ ಪರಮಲ್ಲಮೆಂಬುವಾ
ಕ್ಷಣಿಕ ಮುಖಾದಿವಾದಿಗಳ ಗಂಟಲಗಾಣದ ರೀತಿ ನಿಮ್ಮ ಲ
ಕ್ಷಣಗಳ ಕಂಡು ಪಾವನ ಪದಾಂಚಿತ ನಿರ್ಮಲ ಪಾಂಶುವಂ ಶಿರೋ
ಮಣಿಯೆನಲಾಂತೆನಯ್ಯ ಶರಣಾ ಶರಣಾಗತವಜ್ರಪಂಜರಾ

( ಬ. ಶ. ಪದ್ಯ ೭೮ )

ಸಂಸಾರಿಕರಿಗೆ ಈ ಮಾತುಗಳು ಎಷ್ಟು ಆಪ್ಯಾಯನಕರವಾಗಿವೆ. ಬಸವಣ್ಣನಿಗೂ ಇನ್ನಿತರ ಮಹಾತ್ಮರಿಗೂ ಇರುವ ವ್ಯತ್ಯಾಸ ಇಲ್ಲಿಯೇ.

ಬಸವಣ್ಣ ಸಂಸಾರವಿದೂರನಲ್ಲ. ಆತ ನಮ್ಮಂತೆ ಸಂಸಾರಿ; ಹೆಂಡಿರು ಮಕ್ಕಳುಳ್ಳಾತ. "ಸಕಲಲೋಕ ವಶೀಕರಣಾದಿ ಸತ್ಕಳಾದೀಕ್ಷಿತರೊಮ್ಮೆ ಆತನನುವಿ

ನಿಂದ ಶಿವಭಕ್ತಿಗೆ ಮುಖ್ಯರಾಗಿ ತಾಪಕ್ಷಯ ಮುಕ್ತಿಯಂ ಪಡೆದರು." ಅವರಿಗೆ ಬಸವ ಗುರು, ಹೌದು. ಆದರೆ ಆತ ಸಂನ್ಯಾಸಿಯಲ್ಲ; ಸಂಸಾರಿ. ಸರ್ವರಿಗೂ ಮುಕ್ತಿಯ ಹೆಬ್ಬಾಗಿಲನ್ನು ತೆರೆದ ಬಸವ "ನೀಲಾಕ್ಷಿಯ ದಿವ್ಯ ಚಿತ್ತನಾಗಿದ್ದಾನೆ." ಸಂಸಾರಿಯಾದವನಿಗೇ ಗೊತ್ತು ಸಂಸಾರಿಗಳ ಸುಖದುಃಖ.

ಬಸವಣ್ಣ ಮಹಾದಾನಿ. ಲೋಹ ಕೇಳಿದವರಿಗೆ ರಜತ ಕೊಟ್ಟ; ರಜತ ಕೇಳಿದವರಿಗೆ ಸುವರ್ಣ ಕೊಟ್ಟ; ಸುವರ್ಣ ಕೇಳಿದವರಿಗೆ ನವರತ್ನ ಕೊಟ್ಟ. ಯಾರು ಬಂದರೂ ಸರಿ, ಯಾರು ಕೇಳಿದರೂ ಸರಿ ಅವರಿವರೆನ್ನಲಿಲ್ಲ. ಮಂಕರು ಮರುಳರೆನ್ನಲಿಲ್ಲ. ಎಲ್ಲರನ್ನೂ ಸಮಭಾವದಿಂದ ಕಂಡ. "ಚರರ್ಕಳೆಲ್ಲರಂ ಸರಿ ಯೆನುತಾವನೀಭವ ವಿಭಾವನದಿಂ ಪರಿಪೂಜಿಸಿ, ಅವರು ಕೇಳಿ ಅರಸಿದ ವಸ್ತುವರ್ಗೆ ವಿವಿಧಂಗಳನಿಂಗಿತಮೆಂದು ಸಲ್ಲಿಪಲ್ಲಿ ಅರುಮರೆಯಿಲ್ಲದಾತ ಬಸವ."

"ಶ್ರೀಮಯಲೋಕನಾಥ, ಶಿವಮತಸಿಂಧುಶೀತಕಿರಣ, ಶಾಶ್ವತ ಜಗದೇಕ ಸದ್ವಿತರಣಾ, ದಂಡಭೃತ್ತಿಮಿರವಿಭಂಜನೋದ್ಯದರುಣಾ, ಬಡವರಭಾಗ್ಯ, ಆದಿಗಣೇಶ, ಪಾದಪದ್ಮದೊಳ್ ಬೊಮ್ಮವ ತೋರಿಕೊಟ್ಟ ಶರಣ, ನತಜನಕಲ್ಮಷಾಪಹರಣ, ನಿತ್ಯಭಾಷ್ಯನಿರ್ಮಿತಮಹಿತಾಗಮಾನುಸರಣಾ, ಅನಾದಿ ವೀರಶೈವೋತ್ತಮ, ಜಗನ್ನ ಮಿತರ ಪಾಲನ, ಭರ್ಜಿತ ಕಾಮಸೋಮ, ಜಲಜಭವಾಂಡಪೂಜ್ಯ, ಸಾಹಸಮಲ್ಲ, ನೀನೋರ್ವನೇ ಗುರುಶಿಖಾಮಣಿ, ಜಗಜ್ಜೀವನ" — ಕವಿ ಹೃದಯ ತುಂಬಿ ಹೊಗಳುವ ಈ ಮಾತುಗಳಲ್ಲಿ ಬಸವಣ್ಣನ ಸಮಗ್ರ ವ್ಯಕ್ತಿತ್ವ ಮೈದಾಳಿ ನಿಂತಿದೆ.

ಅನೇಕ ಮಹಾತ್ಮರು ಬಂದು ಹೋದರು. ಅವರೆಲ್ಲರು ಭವಸಾಗರ ದಾಟಲು ಹೈತ್ರರಾದರು ಅಥವಾ ಹೈತ್ರವನ್ನೊದಗಿಸಿದರು. ಆದರೆ ಅಂಥ ಹೈತ್ರದಿಂದ ಭವಸಾಗರ ದಾಟಿದವರೆಷ್ಟು ಜನ ? ಅದಕ್ಕಾಗಿ ಬಸವಣ್ಣ ಹೈತ್ರನಾಗಲಿಲ್ಲ. ದುರ್ಭವಪಯೋನಿಧಿಯನ್ನೇ ಬತ್ತಿಸಿಬಿಟ್ಟ. 'ಬತ್ತಿಸ ಬಂದ ದುರ್ಭವಪಯೋನಿಧಿ ಯಂ' ಎಂದು ಕವಿ ಹೇಳುತ್ತಾನೆ. ಇದಕ್ಕಿಂತಲೂ ಸುಂದರವಾಗಿ ಅರ್ಥವತ್ತಾಗಿ ಬಸವಣ್ಣನ ವ್ಯಕ್ತಿತ್ವವನ್ನು ಯಾರೂ ಹೇಳಲಾರೆನಿಸುತ್ತದೆ.

ಶಿವನು ಲೋಕಪಾಲಕ. ಆತ ಭಕ್ತರ ಬಂಧು; ಭಕ್ತಿಕಂಪಿತ. ಏನೆಲ್ಲವನ್ನೂ ಈವ ದಾನಿ. ಆದರೆ ಆತನಿಗೆ ಬಸವಣ್ಣನಷ್ಟು ಶಕ್ತಿಯಿಲ್ಲ, ಸಾಮರ್ಥ್ಯವಿಲ್ಲ. ಇದನ್ನು ಅರಿತೇ ಆತ (ಶಿವ) ಹೀಗೆ ಹೇಳುತ್ತಾನೆ :

ಬಂಧವಿಮೋಚನಕ್ಕೆ ಸಕಲೇಶವಿತರ್ಕವಿನೋದ ಸಿದ್ಧಿ ವಿ
ದ್ಬಂಧುರ ಭಾವಕಿನ್ನು ವಚಸೋನ್ಮಯ ವೃತ್ತಿಗೆ ಸಾಧನಂಗಳೊ
ಳ್ಸಿಂಧುಜವೌಳಿ ನೋಡಿ ಬಸವಾಕ್ಷರಮುತ್ತಮಮೆಂದೆನಲ್ಜಗ
ದ್ಬಂಧು ಸಮರ್ಥ ನೀನೆ ಶರಣಾ ಶರಣಾಗತವಜ್ರಪಂಜರಾ

(ಬ. ಶ. ಪದ್ಯ ೮೧)

ಪಂಚಾಕ್ಷರಿ, ಷಡಕ್ಷರಿ ಮಂತ್ರಗಳಿವೆ. ಅವುಗಳನ್ನು ಬಿಟ್ಟು ಬಸವಾಕ್ಷರವೇ ಉತ್ತಮವೆಂದು ನೋಡಿ ತಿಳಿದು ಹೇಳಿದನಂತೆ ಶಿವ. ಈ ಮಾತನ್ನು ಶಿವನಿಂದ ಹೇಳಿಸಿ ಕವಿ ಬಸವಣ್ಣನ ಘನತೆಯನ್ನು ಮೆರೆದಿದ್ದಾನೆ. ಇಲ್ಲಿ ಇನ್ನೊಂದು ಊಹೆಗೂ ಆಸ್ಪದವಿದೆ. ಬಸವಾಕ್ಷರ ಪ್ರಣವಾಕ್ಷರವಾಗಿರಬೇಕು. ಅದನ್ನು ಸಂಗವಿಭು ಅರಿತವನಾಗಿದ್ದುದರಿಂದಲೇ ಶಿವನ ಬಾಯಿಯಿಂದ 'ಬಸವಾಕ್ಷರ ಉತ್ತಮ'ವೆಂದು ನುಡಿಸಿದ್ದಾನೆ.

"ಬಸವಣ್ಣನವರು ವೀರಶೈವರಲ್ಲಿ ಮಂತ್ರಸ್ಥಾನಾಪನ್ನರಾಗಿದ್ದಾರೆ; ಮಂತ್ರದಲ್ಲಿ ಪ್ರಣವ ಸ್ಥಾನವನ್ನೇ ಪಡೆದಿದ್ದಾರೆ" ಎಂಬ ಲಿಂ. ಪ್ರೊ. ಪಿ. ಶಿ. ಬಸವನಾಳರ ಮಾತನ್ನು ಇಲ್ಲಿ ನೆನೆಯಬಹುದು೧.

## ಕಾವ್ಯ ಸೌಂದರ್ಯ–ಸತ್ವ

ನೀತಿಯಿಂದ, ಪ್ರಾರ್ಥನೆಯಿಂದ, ತತ್ವಗಳಿಂದ ಅನೇಕ ಶತಕಗಳು ಜನಪ್ರಿಯವಾಗಿವೆ. ನೀತಿ, ಪ್ರಾರ್ಥನೆ, ತತ್ವಗಳಿಂದ ಕೂಡಿದ ಪದ್ಯಗಳಲ್ಲಿ ಕಾವ್ಯಸೌಂದರ್ಯ ಮೂಡಿಸುವುದು ಕಷ್ಟದ ಕೆಲಸ. ಈ ಕಷ್ಟದ ಕೆಲಸ ಮಾಡಿದ ಕವಿಗಳೂ ಉಂಟು. ಹರಿಹರ ಮತ್ತು ರತ್ನಾಕರವರ್ಣಿಯವರ ಶತಕಗಳಲ್ಲಿ ಕಾವ್ಯಸೌಂದರ್ಯ ವಿಪುಲವಾಗಿದೆ. ಸಂಗವಿಭುವಿನ ಬಸವಶತಕದಲ್ಲಿಯೂ ಕಾವ್ಯಸೌಂದರ್ಯ, ಸತ್ವಕ್ಕೇನು ಕೊರತೆಯಿಲ್ಲ.

ರಸ, ಭಾವ, ಧ್ವನಿ, ಔಚಿತ್ಯ, ಅಲಂಕಾರ – ಈ ಎಲ್ಲ ದೃಷ್ಟಿಗಳಿಂದ ಈ ಶತಕ ಉತ್ಕೃಷ್ಟವಾಗಿದೆ. ಕವಿಯ ಆಂತರಂಗಿಕ ಹಸಿವು, ಕಳವಳ, ಮೊರೆ, ದೈನ್ಯತೆಗಳು ಕಾವ್ಯಕ್ಕೆ ಆತ್ಮಿಕ ಸೌಂದರ್ಯವನ್ನೊದಗಿಸಿವೆ, ಶುದ್ಧ ಸತ್ವವನ್ನಿತ್ತಿವೆ.

ಕಾದಕಲಾಪನಾಣೆ ಕಮಲಾಹಿತಶೇಖರನಾಣೆ ಮಾರಭಿ
ತ್ಪಾದಪಯೋಜದಾಣೆ ಪರಿಪಾಲಿಸದಿರ್ದಡೆ ವೇಗದಿಂದಲೇ
ಕಾದುವ ಕಷ್ಟನಿಷ್ಠುರ ವಿವಾದಗಳುಳ್ಳಹಂಕಾರಲಾಕಿನ
ಯ್ಯಾ ದಯಮಾಡು ದೀನಭರಣಾ ಶರಣಾಗತವಜ್ರಪಂಜರಾ

(ಬ. ಶ. ಪದ್ಯ ೩೭)

ಇಲ್ಲಿಯ ದೈನ್ಯ ಸೀಮೆಗೆ ಮುಟ್ಟಿದೆ. ಈ ಆರ್ತ ಮೊರೆಯಲ್ಲಿ, ಕರುಳ ಕುಮಲದಲ್ಲಿ, ಭಕ್ತ ಮುಂದೆ ಗಳಿಸಲಿಪ ಶುದ್ಧ ಸೌಂದರ್ಯದ, ಆತ್ಮಿಕ ಸೌಂದರ್ಯದ ನಾದವಿದೆ.

---

೧ ಹಳಿಪೇಟಿ ಚಿಂತಾಮಣಿ : ಯುಗಪ್ರವರ್ತಕ ಬಸವಣ್ಣನವರು : ಮುನ್ನುಡಿ ಪುಟ ii

ನೀತಿ ವಿವೇಕ ನಿರ್ಮಲಗುಣಂಗಳನಾರಿಸಲಿಲ್ಲವೆನ್ನೊಳೀ
ಪಾತಕಿಯನ್ನು ಮುಟ್ಟಿಪೊರೆಯಲ್ತರಮೆಂತೆನಲಾದ ಕಬ್ಬಿಸಂ
ಪೂತ ಸುವರ್ಣಮಾಯ್ತು ಪರುಷಾಸ್ಪದದಿಂ ಕನಕಕ್ಕೆ ಸೋಂಕಲಾ
ದಾತುರವಿಲ್ಲ ಸಾಧುಶರಣಾ ಶರಣಾಗತವಜ್ರಪಂಜರಾ

(ಬ. ಶ. ಪದ್ಯ ೬೯)

ಭಕ್ತನ ದೈನ್ಯದಲ್ಲಿಯೇ ಒಂದು ಕೆಚ್ಚಿದೆ. ಉದ್ಧಾರ ಮಾಡಿಕೊಳ್ಳುವವನೇ ಉದ್ಧರಿಸಬಂದವರಿಗೆ ಮಾರ್ಗದರ್ಶನ ಮಾಡುವ ಪ್ರಸಂಗವಿದು. ಇದೂ ಒಂದು ಉದ್ಧಾರದ ಸಾಧನ.

ನಾನು ಪಾತಕಿ ! ಈ ಪಾತಕಿಯನ್ನು ಮುಟ್ಟಿ ಪೊರೆಯುವುದು ಹೇಗೆ ಎಂಬ ವಿಚಾರವೇ ? ಪರುಷದ ಸೋಂಕಿನಿಂದ ಕಬ್ಬಿನ ಸುವರ್ಣವಾಗುವುದು. ಇದರಿಂದ ಪರುಷಕ್ಕೇನು ಕುಂದು ? ಪರುಷವಿರುವುದು ಕಬ್ಬಿನಕ್ಕಾಗಿಯೇ; ಸುವರ್ಣಕ್ಕೆ ಅದರ ಆವಶ್ಯಕತೆ ಏನಿದೆ ? ನೀನಿರುವುದು ನಮ್ಮಂಥ ಪಾತಕಿಗಳ ಉದ್ಧಾರಕ್ಕಾಗಿಯೇ. "ಕನಕಕ್ಕೆ ಸೋಂಕಲಾದಾತುರವಿಲ್ಲ" ಎಂಬ ಮಾತಿನಲ್ಲಿರುವ ಅರ್ಥ ಸೌಂದರ್ಯವನ್ನು ಅರಿತಷ್ಟೂ ಹಿತಕರ.

ಎಡಬಲದಲ್ಲಿ ಬಾಡುವೆಳಪೈರುಗಳಂ ತೊರೆದೆಲ್ಲ ನೀರ್ಗಳಂ
ಜಡನಿಧಿಗಿತ್ತ ವಾಹಿನಿಯ ಪೋಲ್ತ ಜಡಾತ್ಮರ ಪೊಂದಲೇಕೆ ನೀಂ
ಬಡವರ ಭಾಗ್ಯದಂತೆ ದೊರೆಯಲ್ಮರೆಯೊಕ್ಕೆಯನಾಥನೆಂದು ಕೈ
ಪಿಡಿದೊಡನಾಡು ಭಕ್ತಭರಣಾ ಶರಣಾಗತ ವಜ್ರಪಂಜರಾ

(ಬ. ಶ. ಪದ್ಯ ೩೩)

ಇಲ್ಲಿ ಜಡಾತ್ಮರಿಗೂ ವಾಹಿನಿಗೂ ಹೋಲಿಸಿದುದು ಬಹು ಔಚಿತ್ಯಪೂರ್ಣ ವಾಗಿದೆ. ಲೋಕದಲ್ಲಿ ತಪವೆಸಗಿ ಜಪವೆಸಗಿ ಕೇವಲ ತಮ್ಮ ಉದ್ಧಾರವನ್ನೇ ಮಾಡಿಕೊಳ್ಳುವವರನ್ನು ಜಡಾತ್ಮರೆಂದು ಕರೆದು ಕವಿ ಅವರನ್ನು ಎಡಬಲದಲ್ಲಿರುವ ಪೈರುಗಳಿಗೆ ನೀರುಕೊಡದೆ ಹರಿದು ಸಮುದ್ರ ಸೇರುವ ನದಿಗೆ ಹೋಲಿಸುತ್ತಾನೆ. ಇಂಥ ಉಪಮಾನಗಳು ಸಾಹಿತ್ಯದಲ್ಲಿ ವಿರಳ.

ಮಂಜುಳ ಮುಕ್ತಿಕಾಂತೆಯ ಕಚಸ್ಥಲಶೋಭಿತ ಚಾರುಮಲ್ಲಿಕಾಮಂಜರಿ ಯಂತೆ ಬಸವಣ್ಣನ ಕೀರ್ತಿಯು ಪೊಸತಾಯಿತಂತೆ. ಈ ಉಪಮಾನವೂ ಪೊಸತು. ಬಸವಣ್ಣನ ಜೀವನ್ಮುಕ್ತಸ್ಥಿತಿ, ಆತನ ಹೂವಿನಂಥ ಬಾಳು, ಎಣ್ದೆಸೆಗೆ ಹರಡಿದ ಅದರ ತನಿಗಂಪು– ಇವೆಲ್ಲ ಅರ್ಥ ಈ ಉಪಮೆಯಲ್ಲಿ ಧ್ವನಿಸುತ್ತವೆ.

ಮುತ್ತಿನ ಬೆಜ್ಜಮಂ ನೆಗಳಬಲ್ಲವನಿಂ ಬೃಹದಶ್ಮರಂಧ್ರಮೊ
ಪ್ಪೊತ್ತಿಗೆ ತೂಗದಿರ್ಪುವುದದೂಣೆಯೆ ನಿಮ್ಮಯ ಕೀರ್ತನಾನ್ನಮಂ
ತುತ್ತನೊಡರ್ಚುವಂ ನಿಗಮಶಾಸ್ತ್ರಘನೋದನರಾಶಿಯಂ ಬಿಡ
ಲ್ಕೆತ್ತಣ ದೋಷವಾಪ್ತಭರಣಾ ಶರಣಾಗತವಜ್ರಪಂಜರಾ

(ಬ. ಶ. ಪದ್ಯ ೪೯)

ಮುತ್ತಿನ ಬೆಜ್ಜ ಮಾಡುವವನಿಗೆ ದೊಡ್ಡ ಕಲ್ಲಿಗೆ ತೂತು ಕೊರೆಯಲು ಬರದಿದ್ದರೆ ಅದು ಊಣೆಯೆನಿಸುವುದೇ ? ನಿನ್ನ ಕೀರ್ತನ ಬಲ್ಲವನಾದರೆ ಸಾಕಲ್ಲ. ( ನಿನ್ನ ಕೀರ್ತನ ಎಂದರೆ ನಿನ್ನ ತತ್ತ್ವದ ಕೀರ್ತನ ). ವೇದಶಾಸ್ತ್ರಗಳನ್ನು ಅರಿಯದಿದ್ದರೆ ಊಣೆಯೆನಿಸುವುದೇ ? "ವೇದಶಾಸ್ತ್ರಾಗಮ ಕೊಟ್ಟಣದ ನುಚ್ಚು ತೌಡು ಕಾಣಭೋ" ಎಂಬ ವಚನವನ್ನು ಇಲ್ಲಿ ನೆನೆಯಬಹುದು. ವೇದಶಾಸ್ತ್ರ ಬಲ್ಲವನೆಂದರೆ ದೊಡ್ಡ ಕಲ್ಲಿಗೆ ತೂತು ಕೊರೆದವನಿದ್ದಂತೆ—ಎನ್ನುವ ಧ್ವನಿಯಲ್ಲಿ ಶರಣರು ತಂದ ಹೊಸಹುಟ್ಟು, ಅವರು ಕಂಡು ಆಚರಿಸಿದ ಹೊಸ ತತ್ತ್ವ ಅಡಗಿದೆ.

ಧರೆಯೊಳು ಪುಟ್ಟಲೇನು ನರವೇಷದಿ ನಂದನನಾದಡೇಂ ಮಹೀ
ಸುರನಿಗೆ ಲೋಗರಂತೆ ಕುಣಿದಾಡಿದಡೇಂ ಜಿನಭೂಪಮಂತ್ರಿ ಶೇ
ಖರನೆನಲಿದ್ದಡೇನು ಫಲಿತಾರ್ಥವು ಮದ್ಗುರು ನಂದಿಕೇಶನೆಂ
ದರುಹಿಸಿಕೊಳ್ವುದೇಕ ಶರಣಾ ಶರಣಾಗತವಜ್ರಪಂಜರಾ

( ಬ. ಶ. ಪದ್ಯ ೫೨ )

ಈ ಪದ್ಯದಲ್ಲಿ ಧ್ವನಿ ಬಹು ತೀಕ್ಷ್ಣವಾಗಿದೆ. ನೀನು ಏನಾದರೇನು ? ಮದ್ಗುರು ನಂದಿಕೇಶನೆಂದರುಹಿಸಿಕೊಂಡರೆ ಮಾತ್ರ ಸಾರ್ಥಕ ಎನ್ನುವಲ್ಲಿ, ನನ್ನಂಥವರ ಉದ್ಧಾರಕ್ಕಾಗಿಯೇ ನಿನ್ನ ಅವತಾರ; ನೀನು ಅದನ್ನೇ ಮುಖ್ಯವಾಗಿ ಮಾಡಬೇಕು ಎಂಬ ಅರ್ಥಸಂಪತ್ತಿ ಅಡಗಿದೆ.

ದೀನದಯಾಳುವೆಂದೆ ಗುರುವೆಂದೆ ಶಿವಾರ್ಪಣಕರ್ಮನೆಂದೆ ವಿ
ದ್ಯಾನಿಧಿಯೆಂದೆನಲ್ಲದೆ ಮಹೀಶವಶಾತ್ತ ವಿಭುತ್ವಮಾಂತ ಮಂ
ತ್ರೀಶ ವಿಶೇಷನೆಂದೆನೆ ವೃಥಾ ಮರವೇಂ ಮುಳಿಸೇಕೆ ಪಾಲಿಸ
ಯ್ಯಾ ನತನಪ್ಪೆ ಸಾಧುಶರಣಾ ಶರಣಾಗತವಜ್ರಪಂಜರಾ

( ಬ. ಶ. ಪದ್ಯ ೪೨ )

ಈ ಪದ್ಯದಲ್ಲಿರುವ ವ್ಯಂಗ್ಯವನ್ನು ಅನುಭವಿಸಿದಷ್ಟೂ ಸುಖವೆನಿಸುತ್ತದೆ. ಬಸವಾ ನಿನಗೇಕೆ ಮರವಾಯ್ತು ? ಮುನಿಸೇಕೆ ಬಂತು ? ನಾನು ನಿನ್ನನ್ನು ಏನೆಂದು ಕರೆದೆ ? ದೀನ ದಯಾಳುವೆಂದೆ; ವಿದ್ಯಾನಿಧಿಯೆಂದೆ. ಮತ್ತೆ ನಿನಗೆ ಮರವೇಕೆ ? ಮುನಿಸಿಟ್ಟೇಕೆ ? ಸಿಟ್ಟು, ಮರೆವು ರಾಜರಿಗೆ, ಮಂತ್ರಿಗಳಿಗೆ ಸಹಜ. ನಾನು ನಿನಗೆ ಮಹೀಶವಶಾತ್ತವಿಭುತ್ವಮಾಂತ ಮಂತ್ರೀಶವಿಶೇಷನೆಂದೆನೆ ? ಇಲ್ಲ. ಹಾಗಾದರೆ ನಿನಗೇಕೆ ಮರೆವು ? ಏಕೆ ಸಿಟ್ಟು ?

ಕವಿಯು ಭಕ್ತಿನಿರ್ಭರದಲ್ಲಿ ಧೀರನಾಗಿ ನುಡಿವ ಈ ಮಾತು ಬಸವನನ್ನು ಭಕ್ತರ ಹತ್ತಿರಕ್ಕೆ ತರುತ್ತದೆ; ಭಕ್ತರನ್ನು ಬಸವನ ಹತ್ತಿರಕ್ಕೆ ಒಯ್ಯುತ್ತದೆ. ಇದು ಕಾವ್ಯಕ್ಕಿರಬೇಕಾದ ಸತ್ವ, ಸೌಂದರ್ಯ.

ಬಾಣನ ಭಕ್ತಿಯುಂ ಮನೆಯ ಬಾಗಿಲು ಬಲ್ಲುದು ಪಾರ್ಥ ಭಕ್ತಿಯುಂ
ಬಾಣವು ಬಲ್ಲುದೊಂದಡಿಯು ಬಲ್ಲುದು ಕಣ್ಣಪನೊಪ್ಪು ಭಕ್ತಿಯುಂ
ಮಾಣದೆ ನಿಮ್ಮ ಭಕ್ತಿಯನು ಚಿತ್ತವು ಬಲ್ಲುದು ಚಿನ್ಮಯಾತ್ಮ ಕ
ಲ್ಯಾಣಪುರಪ್ರಸಿದ್ಧ ಶರಣಾ ಶರಣಾಗತವಜ್ರಪಂಜರಾ

( ಬ. ಶ. ಪದ್ಯ ೬೯ )

ಅರ್ಥ, ಭಾವ, ಬೆಡಗಿಗೆ ಈ ಪದ್ಯ ಒಳ್ಳೆಯ ಉದಾಹರಣೆ. ಕವಿಯು ಯಾರಿಗೂ ತಿಳಿಯದ ವಿಷಯ ಹೇಳಿ ನಮಗೆ ದಂಗುಬಡಿಸುತ್ತಾನೆ. ಬಾಣ, ಪಾರ್ಥ, ಕಣ್ಣಪ್ಪ ಇವರೇ ಭಕ್ತರೆಂದು ನಾವು ತಿಳಿದಿದ್ದೆವು. ಆದರೆ ಬಾಗಿಲು, ಬಾಣ, ಅಡಿ ಇವು ಕಡಿಮೆಯಲ್ಲ; ಅವು ಅವರ ಭಕ್ತಿಯನ್ನು ಅಳೆದು ನೋಡಿವೆ ಎಂದು ಹೇಳಿ ಕವಿಯು ಬಾಗಿಲು, ಬಾಣ, ಅಡಿಗಳಿಗೂ ಭಕ್ತಿಯ ಪಟ್ಟವನ್ನು ಕಟ್ಟುತ್ತಾನೆ—ತನ್ನ ಕಾವ್ಯಾಭಿಷೇಕಗೈದು.

ಕಣ್ಣಿವೆಯಿಕ್ಕುವಾ ಸಮಯ ಮಾತ್ರವು ನಿಶ್ಚಲಭಾವದಿಂ ಭವ
ತ್ಪುಣ್ಯ ಕಥಾಮೃತಕ್ಕೆ ಕಿವಿಗೊಟ್ಟ ಮನುಷ್ಯನ ಪಾಪರಾಶಿ ನಿ
ರ್ವಿಣ್ಯತೆಯೊಂದಿ ಚಕ್ಕನುದುರಲ್ಮೊಗಮಾದುದು ದೀನಬಂಧು ಬ
ಲ್ಪಣ್ಣೆಲೆಯಂತೆ ಸತ್ವಭರಣಾ ಶರಣಾಗತವಜ್ರಪಂಜರಾ

( ಬ. ಶ. ಪದ್ಯ ೭೦ )

ಕವಿ ಔಚಿತ್ಯ ಬಲ್ಲವನಾಗಿದ್ದಾನೆ. ಅಕ್ಷರ, ಶಬ್ದ, ವಾಕ್ಯ, ಭಾವ ಎಲ್ಲ ರೀತಿಯ ಔಚಿತ್ಯ ಆತನ ಕಾವ್ಯದಲ್ಲಿ ಕಾಣುತ್ತೇವೆ. ಇಲ್ಲಿ 'ಚಕ್ಕನೆ' 'ಪಣ್ಣೆಲೆ' ಈ ಶಬ್ದಗಳ ಪ್ರಯೋಗ ಬಹು ಔಚಿತ್ಯಪೂರ್ಣವಾಗಿದೆ. 'ಗತಿ, ಸ್ಥಿತಿ'ಯನ್ನು ತೋರಿಸುತ್ತ ಆ ಶಬ್ದಗಳು ಸಾರ್ಥಕಗೊಂಡಿವೆ.

ಬತ್ತಿಸಬಂದೆ ದುರ್ಭವ ಪಯೋನಿಧಿಯಂ ಬರಿಗಾಲಿಲ್ಲೈದಿ ದಾ
ಟುತ್ತಿಹರೆನ್ನಲೆಲ್ಲ ಶಿವಭಕ್ತರು ಮುಕ್ತರು ನಿನ್ನ ಪುಣ್ಯದಿಂ
ಗೊತ್ತಿಗೆ ಸೇರಲಿನ್ನು ಬರಿದೇತಕೆ ಚಿಂತೆಯನಾದಿ ವೀರಶೈ
ವೋತ್ತಮನಾಗಿ ಸಾರ ಕರುಣಾ ಶರಣಾಗತವಜ್ರಪಂಜರಾ

( ಬ. ಶ. ಪದ್ಯ ೭೨ )

ಈ ಶತಕದಲ್ಲಿಯೇ ಶ್ರೇಷ್ಠವಾದ ಪದ್ಯವಿದು. ಇಲ್ಲಿ ಯಾವ ಅಲಂಕಾರವೂ ಇಲ್ಲ, ಚಮತ್ಕಾರವೂ ಇಲ್ಲ; ಏನೂ ಇಲ್ಲ. ಆದರೆ ಕಾವ್ಯ ಸಾಧಿಸಬೇಕಾದುದು ಇಲ್ಲಿದೆ. ಮಹೋನ್ನತಿ ಇದೆ. ಮಹೋನ್ನತಿ ಒಮ್ಮೊಮ್ಮೆ ಕವಿಗಳ ಒಂದು ಸಾಲಿನಲ್ಲಿ, ಒಂದು ವಾಕ್ಯದಲ್ಲಿ, ಒಂದು ಮಾತಿನಲ್ಲಿ ಮೂಡಿ ನಿಲ್ಲುತ್ತದೆ. ಅದನ್ನೋದಿದಾಗ ಮಹೋನ್ನತಭಾವ ಮೈದುಂಬಿ ಬರುತ್ತದೆ. "ಬತ್ತಿಬಸಂದೆ ದುರ್ಭವಪಯೋನಿಧಿಯಂ"— ಈ ಒಂದು ವಾಕ್ಯಖಂಡದಲ್ಲಿ ಮಹೋನ್ನತಿ ಮೈದಾಳಿ ನಿಂತಿದೆ. ಈ ಮಾತು ಕವಿಯ ಆತ್ಮದ ಮಾತು. ಇಂಥ ಮಾತುಗಳು ಸಾಹಿತ್ಯದಲ್ಲಿ ಎಲ್ಲೆಯೋ ಅಲ್ಲೊಂದು, ಇಲ್ಲೊಂದು. ಕವಿಯು ತನ್ನ ಸತ್ವವನ್ನೆಲ್ಲ, ಶಕ್ತಿ ಸೌಂದರ್ಯವನ್ನೆಲ್ಲ

ಒಮ್ಮೊಮ್ಮೆ ಇಂಥ ವಾಕ್ಯಗಳಲ್ಲಿ ಹಿಡಿದಿಡುತ್ತಾನೆ. ಸಮರ್ಥ ಮತ್ತು ಪ್ರತಿಭಾವಂತ ಕವಿಗಳಿಗೆ ಮಾತ್ರ ಇದು ಸಾಧ್ಯ. ಇಂಥ ವಾಕ್ಯಗಳು ಕವಿಯ ಜೀವನದರ್ಶನವನ್ನು, ಆತನ ಆಳ ಎತ್ತರಗಳನ್ನು ತೋರಿಸುತ್ತವೆ.

## ಭುವನೈಕನಾಯಕೀ ಶತಕ

ಪಾರ್ವತಿಯನ್ನು ಕುರಿತು ಅನನ್ಯಭಕ್ತಿಯಿಂದ ಸ್ತುತಿಸಿದ ಶತಕವಿದು. ಆಕೆಯ ಮಹತ್ವವನ್ನು ಎಷ್ಟು ಹೇಳಿದರೂ ತೀರದು ಕವಿಗೆ. ಸಕಲ ದೇವತೆಗಳೂ ತ್ರಿಮೂರ್ತಿಗಳೂ ಆಕೆಯ ಕರುಣೆಯಿಂದಲೇ ಬದುಕಿದ್ದಾರೆ ಎನ್ನುತ್ತಾನೆ ಆತ. "... ತದಿತರಮೇಕಮೇವಮದು ಜೊಮ್ಮಮದೌ" ಎಂಬುದು ಪಾರ್ವತಿಯೇ.

ಪಾರ್ವತಿ ಮಹದಾದಿಕಾರಣೆ, ಭಕ್ತಾಮಯ ಭಂಜನೆ, ಕಂಟಕಕುಬ್ಬಸ; ಕಲುಷ ಜಾಲಕೆ ಮುಮ್ಮಳಿ; ಜ್ಯೇಷ್ಠ (ದರಿದ್ರ ಲಕ್ಷ್ಮಿ) ಳೆಂಬ ಬಲ್ಬಂಟಿಗೆ ಎಂಟನೇ ಶನಿ; ಭೂತಗಣಾದಿಯುಪರಾಗಜರ್ಗೆ ಗಂಟಲಗಾಣ; ಜಗದ್ಭಿಷಜೆ. ಆಕೆಯ ಕೃಪೆಗೆ, ಏಕೆ ಆಕೆಯ ಪಾದಧೂಳಿಯ ಕೃಪೆಗೆ ಲೋಕದಲ್ಲಿ ಯಾವುದು ಸಾಟಿಯಿದೆ ?

ದೀನಮನೋಹರೇ ದಿವಿಜಧೇನುಸಹಸ್ರಕದೇನು ದಿವ್ಯ ಸಂ
ತಾನಸಹಸ್ರಕಂ ಮಣಿಸಹಸ್ರಕೆ ಸಾಧ್ಯಮೆಯುಷ್ಮದೀಯ ಪಾ
ದಾನುಸಮರ್ಚಕಾಂಘ್ರಿತಲಧೂಳಿಲತಾಂಗಿಯ ನಿತ್ಯದಾನ ಸಂ
ಧಾನ ವಿಧಾನ ವೈಖರಿಯು ಬಣ್ಣಿಪುದೇಂ ಭುವನೈಕನಾಯಕೀ

(ಭು. ನಾ. ಶ. ಪದ್ಯ ೮)

ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ— ಇವು ಸಹಸ್ರ ಸಂಖ್ಯೆಯಲ್ಲಿದ್ದರೂ ಏನು, ಅಮ್ಮನವರ ಪಾದಪೂಜಿಸುವ ಭಕ್ತನ ಅಂಘ್ರಿತಲಧೂಳಿಲತಾಂಗಿಗೆ ಸಮಾನವಾದಾವೇ ? ಆ ಧೂಳಿಲತಾಂಗಿ ಕೊಟ್ಟುದನ್ನು ಇವು ಕೊಡಬಲ್ಲವೇ ? 'ಧೂಳಿಲತಾಂಗಿ' ಎಂಬುದು ಕವಿಯ ಭಾವೌನ್ನತ್ಯವನ್ನು ಸಾರುತ್ತದೆ; ಬಹು ಸುಂದರ ಶಬ್ದವನ್ನು ಆತ ಸೃಷ್ಟಿಸಿದ್ದಾನೆ. ಇಲ್ಲಿರುವ ಅರ್ಥಗೌರವ, ವ್ಯಂಗ್ಯ, ತೀಕ್ಷ್ಣತೆ ಕವಿಯ ಅಸಾಧಾರಣ ಪ್ರತಿಭೆಗೆ ಸಾಕ್ಷಿಯಾಗಿವೆ.

ಕವಿ ಸಂಗವಿಭುವಿನಲ್ಲಿ ಹೊಸತನ ಬಹಳವಿದೆ. ಆತ ಬಹು ನಿಶಿತಮತಿ. ಆತನ ತರ್ಕಕ್ಕೆ ಇದಿರಿಲ್ಲ. ಆಡುವ ಮಾತು ಋಜುತೆಯಿಂದ ಕೂಡಿರುತ್ತದೆ; ಅದು ಸುಂದರವೂ ರಸಸ್ಯಂದಿಯೂ ಆಗಿರುತ್ತದೆ. ಆತನ ಹೊಸತನಕ್ಕೆ ಉತ್ತಮ ಉದಾಹರಣೆ ಈ ಕೆಳಗಿನ ಪದ್ಯ.

ಅರಿದರೆ ಪಂಕಭಂಗ ಜಡರಾಶಿಗಳಿಂ ಪರಿಪೂರ್ಣವಾಗಿ ದು
ಸ್ತರಗಹನತ್ವಮಾಂತ ಭವಸಾಗರಮಾ ರಘುವೀರ ಕಟ್ಟ ತಾಂ
ಸರಿಸನು ಭಾರ್ಗವಂ ಕುಡಿಯ ಕುಂಭಜನಿಂತಿದು ಪಾರುಗಂಡರಾ
ರ್ಕರುಣಿಸಿ ದಾಟಿಸಿನ್ನ ನವಕರ್ಣಧರೇ ಭುವನೈಕನಾಯಕೀ

(ಭು. ನಾ. ಶ. ಪದ್ಯ ೯)

ಕೆಸರು, ತೆರೆ, ನೀರಿನಿಂದ ಕೂಡಿದ ಸಾಗರವನ್ನು ರಾಮ ಕಟ್ಟಿದ, ಅಗಸ್ತ್ಯ ಕುಡಿದ, ಪರುಶುರಾಮ ಹಿಂದಕ್ಕೆ ಸರಿಸಿದ. ಆದರೆ ಅವರಿಗೆ ಪಾಪ, ಸೋಲು, ಜಡತನಗಳಿಂದ ಕೂಡಿದ ಭವಸಾಗರವನ್ನು ಕಟ್ಟುವುದು, ಕುಡಿವುದು, ಸರಿಸುವುದು ಸಾಧ್ಯವೇ ? ಈ ಭವಸಾಗರವನ್ನು ದಾಟಿಸಬಲ್ಲವಳು ನೀನೊಬ್ಬಳೇ. ನೀನು ನವ ಕರ್ಣಧರೆ (ಹೊಸ ನಾವಿಕಳು).

ಶೇಷಕಲಾಪನಾತನುಯಶೇಷಕಲಾಪಳು ನೀನು ತದ್ಗುಣಾ
ನ್ವೇಷಣಮಿಲ್ಲಮೇಂ ಪತಿತನಂ ಪರಿಪಾವನ ಮಾಡಿದೆಂದು ಸ
ದ್ಭೂಷಣವಾಗಿ ತೋರಿತು ಸತೀಯೆನೆ ನಿನ್ನೊಳು ಸಾರ್ಥಕಂ ಜಗ
ದ್ಭೇಷಜೆಯಾಗಿ ಕಾಯ್ದೆ ಭವರೋಗಗಳಿಂ ಭುವನೈಕನಾಯಕೀ
(ಭು. ನಾ. ಶ. ಪದ್ಯ ೬೩)

ಶಿವನು ಶೇಷಕಲಾಪ (ನಾಗಾಭರಣ); ಪಾರ್ವತಿಯು ಶೇಷಕಲಾಪಳಲ್ಲ. ಶೇಷ ಎಂಬುದು ಇಲ್ಲಿ ಶ್ಲೇಷೆಯೂ ಆಗಿದೆ. ಹಾಗೆ ನೋಡಿದರೆ ಆತ ಶೇಷ (ಅಪೂರ್ಣ), ಆಕೆ ಅಶೇಷಳು ( ಪೂರ್ಣತೆಯುಳ್ಳವಳು ). ಆತ 'ಪತಿತ,' ಆತನನ್ನು ಪಾವನ ಮಾಡಿದಳು. ಇಷ್ಟೇ ಅಲ್ಲ 'ಪತಿತನಂ' (ಗಂಡನತನವನ್ನು) ಪಾವನಮಾಡಿದಳು. ಇದುವೇ ಸತಿಯ ಸದ್ಧರ್ಮ. ಅಂತೆಯೇ ಆಕೆಯಲ್ಲಿ ಸತೀ ಎಂಬುದು ಸಾರ್ಥಕ ವಾಗಿದೆ. ಪಾರ್ವತಿಗೆ 'ಸತಿ' ಎಂಬ ಹೆಸರೂ ಉಂಟು. ಶ್ಲೇಷೆಯನ್ನು ಅತ್ಯಂತ ಧ್ವನಿಪೂರ್ಣವಾಗಿ ಬಳಸಿಕೊಂಡು ಕವಿ ತನ್ನ ಸಾಮರ್ಥ್ಯವನ್ನು ಮೆರೆದಿದ್ದಾನೆ.

ಕವಿ ಪಾರ್ವತಿಯನ್ನು 'ಶಾಮಲೆ' ಎನ್ನುತ್ತಾನೆ. ಆಕೆ ನಾರಾಯಣಿ ಎನ್ನುವುದು ಆತನ ಭಾವವಿದ್ದಂತೆ ಕಾಣುತ್ತದೆ. "ಕೋಮಲ ನೀಲಭಾಸ್ವದ ಕಳೇಬರ ಮೊಪ್ಪಿತು", "ನೀಲಸರೋರುಹಾಕ್ಷಿ"– ಎಂದು ಕವಿ ಆಕೆಯನ್ನು ವರ್ಣಿಸುತ್ತಾನೆ.

ತಾಮರಸಂಗಳಂಘ್ರಿಮುಖ ನೇತ್ರಕರಂಗಳು ಮಿತ್ರಜಾಹೃದೋ
ತ್ಸೀಮೆಯೊಳೊಪ್ಪಿದಂತೆ ಮೆರೆಗುಂ ಭವದಂಗರುಚಿಪ್ರಭಾವದಿಂ
ಶಾಮಲೆ ತದ್ಗುಣಾವಳಿಯ ಮೂಲಗಳಂ ನೆರೆಗಂಡು ಬಣ್ಣಿಸಲ್
ಭೂಮಿಧರಂ ವಿಚಾರಮನುಗೊಂಬನೇಂ ಭುವನೈಕನಾಯಕೀ
(ಭು. ನಾ. ಶ. ಪದ್ಯ ೬೯)

ಪಾರ್ವತಿಯ ದೇಹ ನೀಲ; ಆ ನೀಲದ ಅಂಗರುಚಿಯಿಂದ ಎಂಥ ಸೊಗಸುಂಟಾಗಿದೆಯೆಂಬುದನ್ನು ಕವಿ ಇಲ್ಲಿ ಬಹು ಸೊಗಸಾಗಿ ವರ್ಣಿಸಿದ್ದಾನೆ. ಯಮುನಾ ನದಿಯಲ್ಲಿ ಕಮಲಗಳು ಶೋಭಿಸಿದಂತೆ ಪಾರ್ವತಿಯ ನೀಲದೇಹದಲ್ಲಿ ಪಾದ, ಮುಖ, ಕಣ್ಣು ಕೈಗಳು ಶೋಭಿಸಿವೆ. ಪಾದ, ಮುಖ, ಕಣ್ಣು ಕೈ— ಇವೂ ಕಮಲಗಳೇ; ಆಕೆಯು ನೀಲದೇಹ ಯಮುನೆಯಲ್ಲಿ ತೇಲುವ ಕಮಲಗಳು. ಈ ಕಮಲಗಳ ಗುಣ (ದೇಂಟು) ಗಳ ಮೂಲವನ್ನು— ಎಂದರೆ ಪಾರ್ವತಿಯ ನಿಜವನ್ನು, ಮೂಲವನ್ನು

ಕಂಡು ಬಣ್ಣಿಸಲು ಯಾರಿಗೆ ಸಾಧ್ಯ ? ಕವಿಯ ಕಲ್ಪನೆಗೆ ಇಲ್ಲಿ ಗರಿಮೂಡಿ ನಿಂದಿದೆ, ಭಾವನೆಗೆ ಬೆಡಗಿನ ಸ್ಥಾನವಾಗಿದೆ.

ಭುವನೈಕನಾಯಕೀ ಶತಕದಲ್ಲಿ ನೀತಿ ಸಪ್ರರಾಗಿ ಹರಡಿಕೊಂಡಿದೆ. ವರ್ಣನೆಯ ಕಡೆಗೇನೇ ಕವಿಯ ಲಕ್ಷ್ಯ ಹೆಚ್ಚಿದ್ದರೂ ನೀತಿಯನ್ನು ಆತ ಹೇಳದೆ ಬಿಟ್ಟಿಲ್ಲ. ಈ ನೀತಿ ಕುರುಡು, ಕುಂಟು ನೀತಿಯಲ್ಲ. ಜೀವಂತ ನೀತಿ; ಜೀವನಕ್ಕೆ ಬೇಕಾದ, ಜೀವನವನ್ನು ದೇವನಡಿಗೊಯ್ದು ಮುಟ್ಟಿಸುವಂಥ ನೀತಿ.

ದಾನಗುಣ ದೊಡ್ಡದು. ಅಂತೆಯೇ ಕವಿ ಈ ಗುಣವನ್ನೇ ಕೊಡೆಂದು ಕೇಳುತ್ತಾನೆ. ಕೇಳುವುದರಲ್ಲಿ ಹೊಸತನವಿದೆ, ಸೊಗಸಿದೆ. "ಪಶುವಾದಡು (ಕಾಮಧೇನು) ದಾನದಿ ಶೋಭಿಸಿತ್ತು." ಆದುದರಿಂದ "ಮಾನವ ಜನ್ಮದೊಳ್ **ಕೊಡುವುದೇ ಕೊಡು**" ಎಂದು ಭಕ್ತಿಯಿಂದ ಬೇಡುತ್ತಾನೆ. ಮನುಷ್ಯ ಬೇಡುವುದನ್ನು ಕಲಿಯಬಾರದು. ಅದರಂತೆ ಬೇಡಿದವರಿಗೆ ಕೊಡದಿರುವ ಗುಣವನ್ನೂ ಕಲಿಯ ಕೂಡದು; ಕೊಡುವವನು ಬೇಡಿಸಿ ಕಾಡಿಸಿಕೊಂಡು ಕೊಡಕೂಡದು. ಈ ಭಾವವನ್ನು ಕವಿಯು ಬಹು ಮನೋಹರವಾಗಿ ಹೇಳುತ್ತಾನೆ.

ಬೇಡಿದಡೀವುದೇ ಘನತೆ ಬೇಡದಲಿಪ್ಪುದದಕ್ಕು ಮೆಲ್ಕಣಾ
ಬೇಡುವುದೀಯದೀಗುಣಯುಗಂ ಯುಗಮಾತ್ರದಿ ಜನ್ಮಕೋಟಿಗುಂ
ಮಾಡದಿರಮ್ಮ...............

( ಭು. ವಾ. ಶ. ಪದ್ಯ ೪೪ )

ಶಿವಾರ್ಪಿತ ಬುದ್ಧಿಯಿಂದ ತ್ಯಾಗಿಯಾದರೆ ಏನಾಗುತ್ತದೆ ಎಂಬುದನ್ನು ಕವಿ ಮನ್ಮಥನ ಉದಾಹರಣೆಯಿಂದ ಹೇಳುವ ಸೊಗಸು ಅತನದೇ.

ವಿತತ ಪರೋಪಕಾರದಲಿ ಸತ್ವಫರೊಪ್ಪಿ ಶಿವಾರ್ಪಿತಾನು ಪ
ದ್ಧತಿ ವಿನಿಯೋಗಮಾಗಲಹುದೊಂದಕೆ ನೂರು ಮನೋಜನಂಗಮೊಂ
ದತುಳ ವಿಭೂತಿರೂಪಮನುಸಾರಿತು ನಿರ್ಜರ ಕಾರ್ಯದಲ್ಲಿ ಸಂ
ಪ್ರತಿಕರಮಾಂತ ಪಾವನ ಶತಾಂಗಪದಂ ಭುವನೈಕ ನಾಯಕೀ

( ಭು. ನಾ. ಶ. ಪದ್ಯ ೪೮ )

ಪರೋಪಕಾರದಿಂದ ಉಂಟಾಗುವ ಫಲ ಒಂದಕ್ಕೆ ನೂರು; ಅಲ್ಲದೆ ಅದರಿಂದ ವಿಭೂತಿ ಪದವೂ ಕೈಸಾರುವುದು. ದೇವತೆಗಳ ಕಾರ್ಯದಲ್ಲಿ ಕಾಮ ತನ್ನ ದೇಹವನ್ನು ಸುಟ್ಟುಕೊಂಡ. ಶಿವನ ಉರಿಗಣ್ಣಿನ ಬೆಂಕಿಯಿಂದ ಆತನ ದೇಹ 'ವಿಭೂತಿ ರೂಪಮನುಸಾರಿತು.' ಅಷ್ಟೇ ಅಲ್ಲ ಆತ 'ಶತಾಂಗ' ಎಂದರೆ ಅನೇಕ ಅಂಗಗಳನ್ನು ಪಡೆದ. ಲೋಕದಲ್ಲಿ ಜನರೆಷ್ಟೋ ಅಷ್ಟು ಅಂಗಗಳನ್ನು ಆತ ಪಡೆದ. ಆತ ಅಂಗಜನಲ್ಲವೇ ? ಮನ್ಮಥನ ಉದಾಹರಣೆಯಿಂದ ಕವಿ ಸಕಲರೂ ಒಪ್ಪುವಂಥ, ಸಕಲ ಕಾಲಕ್ಕೂ ಬೇಕಾಗುವಂಥ ತತ್ವವನ್ನು ಹೇಳಿದ್ದಾನೆ. ಅಲ್ಲದೆ ಮನ್ಮಥನ ವ್ಯಕ್ತಿತ್ವಕ್ಕೆ ಮೆರುಗು ಕೊಟ್ಟಿದ್ದಾನೆ; ಆತ ಎಂತಹ ತ್ಯಾಗಿ ಎಂಬುದನ್ನು ತುಂಬು

ಮನಸ್ಸಿನಿಂದ ಹೇಳುತ್ತಾನೆ. 'ವಿಭೂತಿರೂಪ' ಮತ್ತು 'ಶತಾಂಗ' ಎಂಬ ಪದಗಳು ಇಲ್ಲಿ ಸಾರ್ಥಕವಾಗಿವೆ.

ಸಣ್ಣ ಕೆಲಸವಾಗಲಿ, ದೊಡ್ಡ ಕೆಲಸವಾಗಲಿ, ಎಂಥ ಕೆಲಸವೇ ಇರಲಿ ನಾಯಕ ಒಬ್ಬನೆ ಇರಬೇಕು. ಬಹಳ ಮಂದಿ ನಾಯಕರಾದರೆ ಆ ಕಾರ್ಯ ಹಾಳು. ಮನೆಯಲ್ಲಿ ಕಾರಭಾರು ಮಾಡುವವರು ಇಬ್ಬರು ಮೂವರಾದರೆ ಆ ಮನೆ ಮೂರೇ ದಿನಗಳಲ್ಲಿ ಹಾಳು. ಬಂಡಿಹೊಡೆಯುವವರು ಇಬ್ಬರು ಮೂವರಾದರೆ ಏನಾದೀತು ? ಇದರಂತೆ ಈ ವಿಶ್ವಪ್ರಪಂಚಕೆ ಹಲವರು ನಾಯಕರಾದರೆ ಇದರ ಗತಿ ಏನಾಗಬಹುದು ? ಇದರ ಬಗ್ಗೆ ಸಂಗವಿಭು ಹೇಳುವುದನ್ನು ಕೇಳುವಾ :

ಬಿದಿ ನೆರೆ ಪುಟ್ಟಿಪಂ ಪೊರೆವ ಕಾರೊಡಲಂ ಕಿಡಿಗಣ್ಣನೊಪ್ಪಿಪಂ
ತುದಿಗೆ ವಿಚಿತ್ರವಮ್ಮ ಬಹು ನಾಯಕರೇರಿದ ಬಂಡಿ ಸಾಗದೆಂ
ಬುದು ನಿಜಮೀ ಗುಣತ್ರಯಗಳಾದಿ ಚಿದೈಕ ಸಕರ್ತೃಕಂಗಳೋ
ತದಿತರಮೇಕಮೇವಮದು ಬೊಮ್ಮಮದೌ ಭುವನೈಕನಾಯಕೀ

( ಭು. ನಾ. ಶ. ಪದ್ಯ ೩೧ )

ತ್ರಿಮೂರ್ತಿಗಳು ನಾಯಕರಾಗಿ ಏರಿದ ಬಂಡಿ ಈ ವಿಶ್ವ. ಅಂತೆಯೇ ಇದರ ಓಟ, ಆಟ ಸರಿಯಾಗಿಲ್ಲ. ಈ ತ್ರಿಮೂರ್ತಿಗಳ ಗುಣತ್ರಯಕ್ಕೆ ಆದಿ ಪಾರ್ವತೀಯೇ, ಆಕೆಯೇ ಏಕಮೇವ ಬೊಮ್ಮ. ಆಕೆಯೇ ನಿಜವಾದ ನಾಯಕಿ, ಏಕೈಕನಾಯಕಿ. ಈ ಮೂವರನ್ನೂ ಹಿಂದೆ ನಿಂತು ನಿಯಂತ್ರಿಸುತ್ತಿರುವವಳು ಅವಳೇ.

ಸಂಗವಿಭು ಏನೇ ಹೇಳಲಿ, ಅದನ್ನು 'ಕಾವ್ಯಮಯವಾಗಿ' ಹೇಳುತ್ತಾನೆ. ಅದರಲ್ಲಿ ತನ್ನತನ ಮೆರೆಯದೆ ಬಿಡುವುದಿಲ್ಲ. ಶತಕದಲ್ಲಿ, ಸ್ತೋತ್ರ ಪದ್ಯಗಳಲ್ಲಿ ಕಾವ್ಯಾಂಶ ಕಡಮೆ ಇರುತ್ತದೆಯೆಂಬ ಮಾತಿಗೆ ಎಲ್ಲಕಾಲಕ್ಕೂ ಈ ಕವಿ ಹೊರಗು. ಪ್ರತಿ ಪದ್ಯದಲ್ಲಿಯೂ ಸೊಗಸು ಇಲ್ಲದೆ ಇಲ್ಲ. ಪಾರ್ವತಿಯ ಕಂಗಳ ದಿಟ್ಟಿಯಿಂದ ಶಿವನ ಪಂಚಮುಖಗಳು ಹೇಗೆ ಅರಳಿದುವೆಂಬುದರ ಸುಂದರ ವರ್ಣನೆ ಇಲ್ಲಿದೆ.

ಜನನಿ ತವೋವಿಮೋಚನ ವಿಲೋಚನ ರೋಚಿಗಳಿಂ ಮಹೇಶನಾ
ನನ ಸರಸೀರುಹಾಬ್ಜ ಶತಪತ್ರ ಕುಶೇಶಯ ಪದ್ಮವೋದ ಸಂ
ಜನಿಸೆ ಪರಾಗಕೇಸರಿಗಳಂತೆ ವಿಭೂತಿಜಟಾರುಣತ್ವಗಳ್
ಮನಸಿಗೆ ಮಂಗಳಂ ಬೆರೆಯೆ ಮೆಚ್ಚಿಸಿದೌ ಭುವನೈಕನಾಯಕೀ

( ಭು. ನಾ. ಶ. ಪದ್ಯ ೫ )

ಕತ್ತಲೆಯನ್ನು ಕಳೆದ ಪಾರ್ವತಿಯ ಕಣ್ಣನೇಸರ ಕಿರಣಗಳಿಂದ ಶಿವನ ಪಂಚ ಮುಖದ ಪಂಚ ಕಮಲಗಳು—ಸರಸೀರುಹ, ಅಬ್ಜ, ಶತಪತ್ರ, ಕುಶೇಶಯ, ಪದ್ಮಗಳು—ಅರಳಿದುವು. ವಿಭೂತಿ ಮತ್ತು ಕೆಂಜಡೆಗಳು ಪರಾಗ ಕೇಸರಿಗಳಂತೆ ಕಂಡುವು. ಸಾವಿರ ಕಮಲಗಳಿದ್ದರೂ ಅವುಗಳ ವಿಕಸನಕ್ಕೆ ಒಬ್ಬನೇ ಸೂರ್ಯ ಸಾಕು. ಶಿವನಿಗೆ ಎಷ್ಟು ಮುಖಗಳಿದ್ದರೂ ಉಮೆ ತನ್ನ ಒಂದೇ ಮುಖದಿಂದ

ಆತನನ್ನು ಸಂತಸಪಡಿಸಬಲ್ಲಳು. ಶಿವನಿಗಿಂತಲೂ ಶಕ್ತಿ ಬಲ್ಲಿದಳು ಎಂಬುದನ್ನು ಕವಿ ಅರ್ಥವತ್ತಾದ ಉದಾಹರಣೆಯಿಂದ ತಿಳಿಸುತ್ತಾನೆ.

ಗಿರಿಜೆ ಜಗದ್ವ್ಯಾಪಕೆ. ಆಕೆಗೆ ಆದಿ ಅಂತ್ಯವೆಲ್ಲಿ ? ಆಕಾಶಕ್ಕೂ ಪಾರ್ವತಿಗೂ ಹೋಲಿಸಿ ಬರೆದ ಈ ಶತಕದ ಮೊದಲನೆಯ ಪದ್ಯ ಓದುಗರಲ್ಲಿ ಆಕೆಯ ವಿರಾಟ್ ಸ್ವರೂಪದ ದರ್ಶನ ಮಾಡಿಸಿ, ಆಕೆಯಲ್ಲಿ ಭಕ್ತಿಗೌರವಗಳನ್ನು ಮೂಡಿಸುತ್ತದೆ. ಆಕೆ ವಿರಾಡ್ರೂಪಿಣಿಯೂ ಹೌದು, ಸುಂದರಿಯೂ ಹೌದು.

ಶ್ರೀ ಪರಮೇಶ್ವರೀ ಗಗನದಂತೆ ವಿರಾಜಿಪುದೇನು ನೀಂ ಜಗ
ದ್ವ್ಯಾಪಕೆ ರಾಜಹಂಸಗಮನಾಂಚಿತೆ ವಿಶ್ರುತ ತಾರಕೋಪ ಸಂ
ದೀಪನೆ ಸತ್ಪಯೋಧರ ವಿಡಂಬನಶೋಭಿತೆ ದಿವ್ಯರೂಪೆ ಪಂ
ಪಾಪುರ ಮಂದಿರೇ ವರದೆ ಸುಂದರೆ ನೀಂ ಭುವನೈಕನಾಯಕೀ
( ಭು. ನಾ. ಶ. ಪದ್ಯ ೧ )

ಶ್ಲೇಷೆಯಿಂದ ಅರ್ಥವೈಚಿತ್ರ್ಯಗಳನ್ನುಂಟುಮಾಡುವುದೂ, ಚಮತ್ಕಾರ ದಲ್ಲಿಯೂ ಒಂದು ಘನವಾದ ತತ್ತ್ವವನ್ನು ಹೇಳುವುದೂ ಕವಿಗೆ ಬಹಳ ಇಷ್ಟ ವಾದುದು. ಅಂಥ ಒಂದು ಪದ್ಯ ಇಲ್ಲಿದೆ:

ವಾಮನ ದಾನವಾರಿ ಕರಮಿಟ್ಟಡಿಗೈಯುತ ದಕ್ಷಿಣಾಸೆಯಿಂ
ತಾಮನುಸೇವಿಸಲ್ಕೆ ಕಡುಮಧ್ಯಮನಾದನು ವಿಪ್ರಜನ್ಮದೊಳ್
ಈ ಮಹಿಬಲ್ಲುದಾತನೆ ತ್ರಿವಿಕ್ರಮ ಮೂರ್ತಿಯು ಲೋಗರಲ್ಲಿ ದಿ
ಕ್ನಾಮಜ ಸುಪ್ರಸಿದ್ಧಗೆ ಕುಯಾಚನಮೇಂ ಭುವನೈಕನಾಯಕೀ
( ಭು. ನಾ. ಶ. ಪದ್ಯ ೩೨ )

ದಕ್ಷಿಣ ದಿಕ್ಕಿನ ಆನೆಯೂ ವಾಮನ; ವಿಷ್ಣುವಿನ ಐದನೆಯ ಅವತಾರವೂ ವಾಮನ. ಆ ಆನೆ ದಾನವಾರಿ ( ಮದೋದಕವುಳ್ಳುದು ); ಕೃಷ್ಣನೂ ದಾನವಾರಿ ( ರಾಕ್ಷಸರ ವೈರಿ ). ದಕ್ಷಿಣಾಸೆಯಿಂದ, ಎಂದರೆ ದಕ್ಷಿಣ ದಿಕ್ಕನ್ನು ಸೇರಿ ಆ ಗಜ ಕಡುಮಧ್ಯಮನಾಯಿತು; ಎಂದರೆ ವಾ-ಮ-ನ ನಡುವೆ ಮಕಾರವುಳ್ಳುದಾಯಿತು. ಅದರಂತೆ ದಕ್ಷಿಣಾಸೆಯಿಂದ ಎಂದರೆ ದಾನದ ಆಸೆಯಿಂದ ವಾಮನನೂ ಕಡು ಮಧ್ಯಮನಾದನು. ಆತ ತ್ರಿವಿಕ್ರಮ ಮೂರ್ತಿ, ಸುಪ್ರಸಿದ್ಧ ವಿಪ್ರ. ಅಂಥವನಿಗೆ ಕುಯಾಚನೆಯೆ ? ಬೇಡುವುದು, ಯಾಚಿಸುವುದು ಒಳ್ಳೆಯದಲ್ಲ; ಅದರಿಂದ ಮಧ್ಯ ಮತನ ಪ್ರಾಪ್ತಿಯಾಗುವುದು, ಗೌರವಕ್ಕೆ ಕುಂದಾಗುವುದು ಎಂಬುದನ್ನು ಕವಿ ಇಲ್ಲಿ ಬಹು ಸೂಕ್ಷ್ಮವಾಗಿ, ಅರ್ಥವತ್ತಾಗಿ ಹೇಳಿದ್ದಾನೆ.

ಪಾರ್ವತಿಯನ್ನು ಕವಿಗೆ ವರ್ಣಿಸಿದಷ್ಟೂ ಕಡಮೆಯೆನಿಸುತ್ತದೆ. ಆಕೆಯ ಅಂಗವನ್ನು, ಅಂಗಾಂಗಗಳನ್ನು ಅವುಗಳ ಚೆಲುವನ್ನು ವರ್ಣಿಸುವಾಗ ಕವಿಯ ದೃಷ್ಟಿ ಆಕೆ ಲೋಕೈಕ ಸುಂದರಿ ಎಂಬುವರ ಕಡೆಗಿದೆಯೆಂದು ಅರ್ಥವಾಗುತ್ತದೆ. ಸಾಮಾನ್ಯ ಒಬ್ಬ ಸುಂದರಿಯನ್ನು ವರ್ಣಿಸಿದಂತೆಯೇ ವರ್ಣಿಸಿದರೂ ಇಲ್ಲಿ ಒಂದು

ಭವ್ಯತೆಯಿದೆ. ಅವೇ ಶಬ್ದಗಳು, ಅವೇ ಉಪಮಾನಗಳು ಇದ್ದರೂ ಈಕೆ ನಿರ್ಗುಣ ಸುಂದರಿ ಎಂಬುದರ ಪರಿಜ್ಞಾನ ಓದುಗರಿಗೆ ಉಂಟಾಗುತ್ತದೆ. ಪಾರ್ವತಿಯ ವರ್ಣನೆಯಿಂದ ಸಾಮಾನ್ಯ ಶಬ್ದಗಳಿಗೂ ಇಲ್ಲಿ ಅನಂತತೆಯ ಹಿರಿಮೆ ಬಂದಿದೆ. ಅವುಗಳಿಗೆ ಔನ್ನತ್ಯದ ಸ್ಥಾನವಾಗಿದೆ; ಸಕಲ ಚೆಲುವಿಗೂ ಚೆಲುವಾದುದನ್ನು ಬಿಂಬಿಸುವ ಸಾಮರ್ಥ್ಯ ಈ ಶಬ್ದಗಳಿಗೆ ಬಂದಿದೆ. ಈ ದೃಷ್ಟಿ ಇಟ್ಟುಕೊಂಡು ಪಾರ್ವತಿಯ ಕುಚಗಳ ವರ್ಣನೆಯ ಈ ಪದ್ಯವನ್ನು ಓದಬೇಕು.

ಅಂಗ ಸಮುದ್ರದಲ್ಲಡಗಿ ತೇಲುವ ಶೈಲಗಳೇನೋ ಪದ್ಮಕೋ
ಶಂಗಳೊ ತದ್ಭವಾಮೃತ ಕರೀರಗಳೋ ನವಶುಕ್ತಿಭಾಸ್ವದು
ತ್ತುಂಗ ಸಮುದ್ಗಕಂಗಳೊ ವಿಹಾರಬೃಹತ್ತನುಗುಪ್ತಕುಂಭಿಕುಂ
ಭಂಗಳೊ ಬಲ್ಲರಾರ್ ಕುಚಯುಗಂಗಳವೋ ಭುವನೈಕನಾಯಕೀ

(ಭು. ನಾ. ಶ. ಪದ್ಯ ೮೮)

## ಪಂಪಾಶತಕ

ತುಂಬಿ ಹರಿಯುವ ನದಿಯಂತೆ ನಿರರ್ಗಳವಾಗಿ ಅಡೆತಡೆಯಿಲ್ಲದೆ ಹರಿಯುತ್ತದೆ ಪಂಪಾಶತಕ. ಚಮತ್ಕಾರವಾಗಲೀ, ಶ್ಲೇಷಾಲಂಕಾರಗಳಾಗಲೀ, ಉಕ್ತಿವೈಚಿತ್ರ್ಯಗಳಾಗಲೀ ಈ ಶತಕದಲ್ಲಿ ಕಾಣಬರುವುದಿಲ್ಲ. ಕವಿಯ ಆರ್ತತೆಗೆ, ಮೊರೆಗೆ ನಾಲಗೆಯಾಗಿದೆ ಈ ಶತಕ. ಬಸವಶತಕ ಮತ್ತು ಭುವನೈಕನಾಯಕೀ ಶತಕಗಳಲ್ಲಿಗಿಂತಲೂ ಇಲ್ಲಿ ಆರ್ತತೆ ಹೆಚ್ಚಿದೆ. ಸೀಮೆಗೆ ಮುಟ್ಟಿದೆ ಇಲ್ಲಿಯ ಮೊರೆ.

ಶಿವನ ಮಹತ್ವವನ್ನು, ಮಹಿಮೆಯನ್ನು ಹೊಗಳುತ್ತ ಕವಿಯು ತನ್ನನ್ನು ಉದ್ಧಾರಮಾಡಲು ಬೇಡುತ್ತಾನೆ. ಕೆಳಗಿನ ಪದ್ಯಗಳಲ್ಲಿ ಆತನ ಆರ್ತತೆ ಹೆಪ್ಪುಗಟ್ಟಿದೆ:

ದುರಿತಂಗಳ್ನೆರೆ ಬಾಧಿಸುತ್ತಲಿರೆ ನಿನ್ನಂ ಸಾರ್ದು ಕೈವಾರಿಸಲ್
ನೆರೆದೆನ್ನಂ ಪರಿಪಾಲಿಪಲ್ಲಿ ಮರೆಯಲ್ಮತ್ತಾರು ಕಾಯ್ವಾರ್ತರರ್
ಧರೆಮುನ್ನಾಗಿಸಿ ಮಿಕ್ಕಲೋಕದವರೊಳ್ಕೇಳಾರ್ತರಕ್ಷಾಮಣೀ
ಶರಣಾಗಿಂದುಕಲಾವತಂಸ ಗುರುವೇ ಪಂಪಾಪುರಾಧೀಶ್ವರಾ

(ಪಂ. ಶ. ಪದ್ಯ ೪)

ನಾನಾಕಂಟಕವೋಸವನ್ನು ಬಿಡಿಸುತ್ತಂ ಕಾಯ್ವುದೆನ್ನಿಂದ ಮೇಣ್
ಭೂನಾಥಾಧಿಕ ಲೋಕವಂಚನಗಳಾರಾಟಂ ಮೊಗಂದೋರದೋಲ್
ನೀನೇ ಮಾಳ್ಪುದು ನೇಮದಿಂದ ನೆರೆ ತನ್ನಂ ಪಾಲಿಸಾನಂದ ಸಂ
ಧಾನಂಗೈವುದು ದೀನನೆಂದು ಕೃಪೆಯಿಂ ಪಂಪಾಪುರಾಧೀಶ್ವರಾ

(ಪಂ. ಶ. ಪದ್ಯ ೧೩)

ಸಹಿಸಲ್ಬಾರದ ಕಂಟಕಂಗಳಿಡರಿನ್ನುಂ ತಟ್ಟದೊಲ್ನೆಟ್ಟನೀ
ಮಹಿಯೊಳ್ಪಾಲಿಪುದೆನ್ನ ನೀನು ಕೃಪೆಯಿಂ ಕಾತ್ಯಾಯನೀ ಸನ್ಮನೋ
ಗೃಹಸಂವಾಸ ವಿನೋದಮೂರ್ತಿ ನಿಗಮಾಲಂಕಾರ ಚಿತ್ಪೂಜ್ಯ ಸಿ
ಸಪ್ಪ್ರಶುದ್ಧಾತ್ಮಕ ಸಿಂಧುತೂಣ ವಿಲಸ್ಪತ್ಸಂಪಾಪುರಾಧೀಶ್ವರಾ
( ಪಂ. ಶ. ಪದ್ಯ ೨೨ )

ನಾನು ಚಪಲ, ಕೋಪಿ, ಕುತರ್ಕಿ, ಸುಳ್ಳ, ದಂಭಕ, ಹಿಂಸಕ– ಹೀಗೆ ಏನೇನೋ ಆಗಿ, ನಾನಾರೀತಿಯ ಪಾಪ ಉಪಪಾಪಗಳನ್ನು ಮಾಡಿದ್ದೇನೆ. ಈಗ ನಿನ್ನನ್ನು ಶರಣುಹೊಕ್ಕಿದ್ದೇನೆ ಅಪರಾಧಂಗಳ ನೋಡದೆ ಸಲಹು– ಎಂದು ಮೊರೆಯಿಡುವಲ್ಲಿ ಕವಿ ತನ್ನ ಅಂತರಂಗವನ್ನು ತೆರೆದಿಟ್ಟಿದ್ದಾನೆ; ಆತನು 'ಸಲಹು' ಎಂದು ಬೇಡುವಲ್ಲಿ ಮಾನವಕೋಟಿಯ ದೀನಧ್ವನಿಯೆಲ್ಲ ಒಟ್ಟುಗೂಡಿದೆಯೆನಿಸುತ್ತದೆ.

ಚಪಲಂ ಚರ್ಚಕನುತ್ರ್ರಕೋಪಿ ಮಿಗೆ ಸುಳ್ಳಂ ಶಾಠ್ಯನುದ್ದಂಭಕಂ
ಕುಪಿತಂ ಕಾತುರನಪ್ರಮಾಣ ಪರಹಿಂಸಾ ಮುಖ್ಯ ಪಾಪಂಗಳಿ
ನ್ನುಪಪಾಪಂಗಳನಾರುಬಲ್ಲರಕಟಾ ನಿನ್ನಂ ಶರಣ್ಪೊಕ್ಕೆನೆ
ನ್ನಪರಾಧಂಗಳ ನೋಡದೊಪ್ಪಿ ಸಲಹೈ ಪಂಪಾಪುರಾಧೀಶ್ವರಾ
( ಪಂ. ಶ. ಪದ್ಯ ೨೪ )

ಕವಿಗೆ ತನಗೆ ಹುಟ್ಟು ಏಕೆ ಉಂಟಾಗಿದೆ ಮತ್ತು ಅದನ್ನು ಹೇಗೆ ಇಲ್ಲದಾಗುವಂತೆ ಮಾಡಬೇಕು ಎಂಬುದು ಈಗ ಈ ಜನ್ಮದಲ್ಲಿ ತಿಳಿದಿದೆ. ಅದನ್ನು ಈ ಪದ್ಯದಲ್ಲಿ ತೋಡಿಕೊಳ್ಳುತ್ತಾನೆ :

ತನುವಂ ತಾಳಿದ ಮೂಲದಿಂದ ಶಿವ ನಿನ್ನಂ ಪೂರ್ವದೊಳ್ಜನ್ಮದಿಂ
ದಿನಿತುಂ ಸೇವಿಸಲಿಲ್ಲವೀಗಲಿಹದೊಳ್ನೀನೇ ಜಗತ್ಕರ್ತನೆಂ
ದೆನುತಂ ಸನ್ನುತಿಗೈದೆನಾಗಿ ಜನನಂ ಮುಂತಿಲ್ಲವಾಗಲ್ಸಮ
ರ್ಚನಮೆಂತೀಯಪರಾಧದಿಂದಲುಳಿಸೈ ಪಂಪಾಪುರಾಧೀಶ್ವರಾ
( ಪಂ. ಶ. ಪದ್ಯ ೧೭ )

ಪೂರ್ವಜನ್ಮದಲ್ಲಿ ನಿನ್ನನ್ನು ಸೇವಿಸಲಿಲ್ಲ. ಅದುಕಾರಣ ಈ ದೇಹವನ್ನು ಧರಿಸಿಬಂದಿದ್ದೇನೆ. ಈಗ ನೀನೇ ಜಗತ್ಕರ್ತನೆಂದು ತಿಳಿದಿದ್ದೇನೆ. ನಿನ್ನನ್ನು ನುತಿಸುತ್ತಿದ್ದೇನೆ. ನನ್ನ ಹಿಂದಿನ ಜನ್ಮದ ಅಪರಾಧವನ್ನು ಮನ್ನಿಸಿ, ಕೃಪೆಗೈದು ಮುಂದೆ ಜನ್ಮವಿಲ್ಲದಂತೆ ಮಾಡು. ಹುಟ್ಟು ಸಾವು ಎರಡರಿಂದಲೂ ಬಿಡುಗಡೆ ಹೊಂದಲು ಒಂದೇ ಮಾರ್ಗ. ಅದು ಜನ್ಮವಿಲ್ಲದಂತೆ ಆಗಬೇಕು. ಹುಟ್ಟು ಅಳಿಸಿಹೋಗಬೇಕು. ಈ ಹುಟ್ಟಿಗೆ ಮೂಲ ಶಿವನನ್ನು ಮರೆತಿರುವುದು; ಅವನನ್ನು ಧ್ಯಾನಿಸಿ, ಸೇವೆಮಾಡದಿರುವುದು. ಹಿಂದಿನ ಜನ್ಮ ಹಾಗಾಯಿತು. ಆದುದರಿಂದ ಈ ಜನ್ಮ ಬಂದಿತು. ಈಗ ಅರಿವು ಮೂಡಿದೆ, ಮುಂದಿನ ಜನ್ಮದಲ್ಲಿ ಬರಬಾರದೆಂಬ ನಿಶ್ಚಿತ ಜ್ಞಾನೋದಯವಾಗಿದೆ; ಈ ಜ್ಞಾನಕ್ಕೆಯೂ ಶಿವನ ನೆನಪೇ ಕಾರಣ.

ಹುಟ್ಟಿಸಿದ ಬಳಿಕ ಕಾಯುವುದು ನಿನ್ನಧರ್ಮ, ನಿನ್ನಕರ್ತವ್ಯ; ಹಾಗೆ ಮಾಡದಿದ್ದರೆ ನ್ಯಾಯವಾಗುವುದಿಲ್ಲ. ನೀನು ನನ್ನನ್ನು ಕಾಯಲೇಬೇಕು; ಕಾಯದಿದ್ದರೆ "ನೀತಿ ಸ್ಥಾಪನೆಯಾಗುವುದಿಲ್ಲ" ಎಂಬ ಕವಿಯ ಮೊರೆಯಲ್ಲಿಯೇ ಒಂದು ಕೆಚ್ಚಿದೆ, ಒಂದು ಆಹ್ವಾನವಿದೆ. ಶಿವನಿಗೆ ಆತನ ಕರ್ತವ್ಯವೇನೆಂಬುದನ್ನು ತಿಳಿಸಿಕೊಡುವ ಗಟ್ಟಿತನವಿದೆ.

ತನುಕೋಶಂ ತನಗಿತ್ತೆಯಾಗಿ ಮಿಗೆ ಪಂಚಪ್ರಾಣಗಳ್ನಾರ್ದವೆ
ನ್ನನು ಸೈಯನ್ನಮಯ ಪ್ರಪಂಚಕನುವಿಂದೆನ್ನಂ ರುಚಿಪ್ರಾಯದಿಂ
ಬಿನಲಿತ್ತೆನ್ನನು ಕಾಯ್ದೊಯಾದಡದು ನೀತಿ ಸ್ಥಾಪನಂ ಲೋಕದೊ
ಳ್ನಿನಗಾರ್ಬಿನ್ನೈಸಲ್ಕೆ ಬಾಧ್ಯರಭವಾ ಪಂಪಾಪುರಾಧೀಶ್ವರಾ
( ಪಂ. ಶ. ಪದ್ಯ ೩೩ )

ತನುಕೋಶವಿತ್ತೆ, ಪಂಚಪ್ರಾಣಗಳಿತ್ತೆ, ಅನ್ನಮಯಕೋಶವಿತ್ತೆ– ಮುಂದಿನದು? "ರುಚಿಪ್ರಾಯದಿಂಬಿನಲಿತ್ತು" ಎಂಬ ಮಾತು ಅತ್ಯಂತ ಧ್ವನಿಪೂರ್ಣವಾಗಿದೆ. ಅನ್ನಮಯ ಪ್ರಪಂಚದಿಂದ ಆನಂದಮಯ ಪ್ರಪಂಚಕ್ಕೆ ಸಾಗಲು ಬೇಕಾದ ಶಕ್ತಿ ಜ್ಞಾನ ಈ 'ರುಚಿ'ಯಲ್ಲಿದೆ. ಅನ್ನದ ರುಚಿ ಆನಂದದ ರುಚಿಗೆ ಏರಲು ಸೋಪಾನವಾಗಬೇಕು. ಇದನ್ನು ನೀನು ಕೊಟ್ಟು ರಕ್ಷಿಸಿದರೆ ಲೋಕದಲ್ಲಿ ನೀತಿಯನ್ನು ಸ್ಥಾಪಿಸಿದಂತಾಗುತ್ತದೆ. ಜನ್ಮಕೊಟ್ಟವನೂ ನೀನೇ, ಅದನ್ನು ನಡೆಸುವವನೂ ನೀನೇ; ಆದುದರಿಂದ ಎಲ್ಲವೂ ನೀನೇ ಎಂದು ನಂಬಿದವರನ್ನು ಕಾಪಾಡುವುದು ನಿನ್ನ ಕರ್ತವ್ಯ. ನೀತಿ ಸ್ಥಾಪನೆಮಾಡಬೇಕು ಎಂದು ತಿಳಿಹೇಳಿ ಮತ್ತೆ ನಿನಗಾರು ಬಿನ್ನೈಸಲ್ಕೆ ಬಾಧ್ಯರು ? ಎಂದು ಹೇಳುವ ಮಾತಿನಲ್ಲಿ ಸೊಗಸು ತುಂಬಿಸೂಸುತ್ತಿದೆ. ನೀನು ಸರ್ವಸಮರ್ಥ, ನಿನಗಿಂತ ಹೆಚ್ಚಿನವರಾರು ? ನಿನಗೆ ಹೇಳಲು ಯಾರಿಗೆ ಶಕ್ತಿಯಿದೆ ಎಂದು ಸಹಜವಾಗಿ ಜನ ಮಾತಾಡುವಂತೆ ಕವಿ ಶಿವನಿಗೆ ಆತ್ಮೀಯತೆಯಿಂದ ಆದರೂ ಧೀರತೆಯಿಂದ ಹೇಳುತ್ತಾನೆ.

ಶಿವನಿಂದ ಬಿಟ್ಟು ಅನ್ಯರಿಲ್ಲ. ಸರ್ವಕ್ಕೂ ಆತನೇ ಕಾರಣ. ಎನಿತು ದೇವತೆಗಳಿದ್ದರೂ ಅವರಲ್ಲಿ ಶಿಕ್ಷೆ–ರಕ್ಷೆಗೆ ಪರಮಾರಾಧ್ಯನೆಂದರೆ ಶಿವನೇ.

ಘನಸರ್ವಜ್ಞತೆಯಲ್ಲಿ ನಿಸ್ತುಲಮಹದ್ಗಾಂಭೀರ್ಯದೊಳ್ನಿತ್ಯವ
ರ್ತನಕಾರುಣ್ಯ ವಿಚಾರದಲ್ಲಿ ವಿಲಸತ್ತತ್ವಾಭಿಮಾನತ್ವದೊಳ್
ಜನುಮಂ ಪುಟ್ಟಿಸಿ ಪಾಲಿಪಲ್ಲಿ ಪರಮಾರಾಧ್ಯತ್ವದೊಳ್ ಲೋಕಪಾ
ವನ ನೀನಲ್ಲದೆ ಬೇರೆ ದೇವರೊಳರೇ ಪಂಪಾಪುರಾಧೀಶ್ವರಾ
( ಪಂ. ಶ. ಪದ್ಯ ೫ )

ಕಾಮಿತ ಸಿದ್ಧಿಗೆ, ಆರೋಗ್ಯ ಪ್ರಮೋದಕ್ಕೆ, ಹೇಮ ಧನ ಧಾನ್ಯ ಕೈಸಾರಲಿಕ್ಕೆ ಮೃತ್ಯುಂಜಯನೇ ನಿನ್ನ ನಾಮೋಚ್ಚಾರಣ 'ಬೀಜ'ವಾಗಿದೆ. ಪತಿತರು ಪಾವನರಾಗುವಲ್ಲಿ, ಶ್ರೇಯಾಭಿವೃದ್ಧಿ ಸಂಗತಿಯಲ್ಲಿ, ಇಷ್ಟ ವಿಭೂತಿಯನ್ನು ಪಡೆವಲ್ಲಿ,

ಆತ್ಮಾನುಸಂಧಾನದಲ್ಲಿ ಶಿವನೇ ನಿನ್ನ ನಾಮಸಂಕೀರ್ತನವೇ ಬೇಕು. ನಿನ್ನ "ನುತಿಯಿಂದನ್ನುತವಾದುದಿಲ್ಲ ಜಗದೊಳ್; ನಿನ್ನನು ಬಲ್ಲಾತನು ನರರಲ್ಲಿ ರುದ್ರನಹುದು."

ಲೋಕದಲ್ಲಿ ಯಾವುದರಿಂದ ಏನು ಸಿಕ್ಕರೂ, ಯಾವ ದೇವರಿಂದ ಏನು ದೊರಕಿದರೂ ಅದೆಲ್ಲ ಸುಲಭವಲ್ಲ. ಸರ್ವರಿಗೆ ಸುಲಭವಾದವನು ಪಂಪಾಪುರಾಧೀಶ್ವರ. ಅದರಂತೆ ಆತ ಸರ್ವಕ್ಕೆ ಗುರುವೂ ಹೌದು.

ನೆರೆ ಕಲ್ಯಾಣಮೊಡರ್ಚುವಲ್ಲಿ ಪತಿತಾರ್ತಗೆಲ್ಲ ದೀನರ್ಗೆ ಮೋ
ಣ್ಣರ ದಾರಿದ್ರಗೆ ಬಾಲಕರ್ಗೆ ಕುರುಡರ್ಕುಂಟರ್ಗೆ ಬಲ್ಲರ್ಗೆ ಬಲ್
ಸಿರಿಯಂ ನೇಮಿಸುವಲ್ಲಿ ನಿನ್ನ ಶಿವನಾಮ ಪ್ರೇಮ ಸಂಕೀರ್ತನಂ
ಗುರುವಾಗಿಪ್ಪುದು ಸರ್ವರಿಂಗೆ ಸುಲಭಂ ಪಂಪಾಪುರಾಧೀಶ್ವರಾ

( ಪ. ಶ. ಪದ್ಯ ೪೯ )

ಗುರುವಾಗಿದ್ದುದು ಸುಲಭವಾಗಿದ್ದುದೇ ಅಚ್ಚರಿಯಿಲ್ಲಿ; ಅದೇ ಮಿಗಿಲಾದುದು. ಭಾರವಾದುದು, ಘನವಾದುದು ಸುಲಭವಾಗಿರುವುದು ಅಪರೂಪ. ಶಿವನು ಘನಕ್ಕೆ ಘನ. ಆದರೂ ಆತ ಸಕಲಜೀವರಾಶಿಗೆ ಸುಲಭನಾಗಿದ್ದಾನೆ, 'ಶಿವ' ಎಂದು ಉಚ್ಚರಿಸಿದರೆ ಸಾಕು, ಆತ ಲಭ್ಯ. ಆತ ಸುಲಭನಾಗಿರುವುದರಿಂದಲೇ ಗುರುವಾಗಿದ್ದಾನೆ. ಸಕಲರಿಗೂ ಅವರಿವರೆನ್ನದೆ ಕರುಣೆದೋರುವ ಕಾರಣದಿಂದ ಆತ ಗುರುವೆನಿಸಿದ್ದಾನೆ.

ಪಂಪಾಶತಕ ನಿರಾಭರಣ ಸುಂದರಿಯಂತೆ ಸಹಜ ಸೌಂದರ್ಯವುಳ್ಳುದಾಗಿದೆ. ಅಲಂಕಾರ, ಚಮತ್ಕಾರ– ಯಾವುದರ ಗೊಂದಲವಿಲ್ಲ. ಇಲ್ಲಿಯ ಸಹಜ ಸೌಂದರ್ಯದಲ್ಲಿ ಸತ್ವ ಆಧಿಕ್ಯವಾಗಿದೆ, ಕಾವ್ಯ ಪಕ್ವವಾಗಿದೆ. ಸಂಗವಿಭುವಿನ ಹೃದಯ ಪಕ್ವವಾದ ಬಳಿಕ, ಹಾಗೆಯೇ ಆತನಿಗೆ ಕಾವ್ಯಕಲೆ ಕರಗತವಾದ ಬಳಿಕ ಈ ಶತಕ ಬರೆದಿರಬೇಕು ಎನಿಸುತ್ತದೆ. ಸಹಜತೆ ಹೆಚ್ಚಿದಷ್ಟೂ ಕಾವ್ಯ ಸತ್ವ, ಸೌಂದರ್ಯ ಹೆಚ್ಚುವುದೆನ್ನಲಿಕ್ಕೆ ಪಂಪಾಶತಕ ಉತ್ತಮ ನಿದರ್ಶನ.

ಶಿವನು ವೇದಾತೀತ; ವೇದಗಳೂ ಆತನನ್ನು ತಮ್ಮ ಧ್ವನಿಯಲ್ಲಿ ಹಿಡಿಯಲಾರವು ಎಂಬ ಮಾತನ್ನು ಕವಿ ಪೌರಾಣಿಕ ಉದಾಹರಣೆಯೊಂದರಿಂದ ಬಹು ಮನೋಹರವಾಗಿ ಇಲ್ಲಿ ಸ್ಪಷ್ಟಪಡಿಸಿದ್ದಾನೆ.

ಅರಸಲ್ಕೀವ ಭವತ್ಪದಂಗಳನು ವೇದಂಗಳ್ಬೆಗರ್ಗಣ್ಣ ಕು
ರ್ಕುರ ರೂಪಂಗಳ ತಾಳ್ದು ಪೆರ್ಚಿ ಪುಡುಕಲ್ಪದ್ದರ್ಶನ ಪ್ರಾಪ್ತಿಯಿಂ
ಬರಿದಾಗಲ್ಕಡುನಾಚಿ ಸೋತು ಮಿಗೆ ತೋಷ್ಣೀಂಭಾವಮಂ ಕೈಕೊಳಲ್
ನರರಾರಿನ್ನು ಸುರರ್ಕಳಾರು ಪಡೆಯಲ್ಪಂಪಾಪುರಾಧೀಶ್ವರಾ

( ಪಂ. ಶ. ಪದ್ಯ ೨೩ )

ಶಿವನ ಪಾದಗಳನ್ನು ಪಡೆಯಲು ವೇದಗಳು ನಾಯಿರೂಪಗಳನ್ನು ಧರಿಸಿದವು. ಹುಡುಕಿ ಹುಡುಕಿ ಕೊನೆಗೆ ಶಿವನ ಪಾದಗಳ ದರ್ಶನ ಪಡೆದುವು. ಆದರೆ ಆಗ ಆದುದೇನು ? ಅವುಗಳ ಬಾಯಿ ಬರಿದಾಗಿತ್ತು. ವೇದಗಳ ಬಾಯಿಗೆ ನಿಲುಕದುದು ಯಾವುದಿದಿದೆ ? ಆದರೆ ಶಿವನು ಅವುಗಳ ಬಾಯಿಗೆ ನಿಲುಕಲಿಲ್ಲ. ಅವನನ್ನು ಹೊಗಳಲು ಅವುಗಳಿಗೆ ಸಾಧ್ಯವಾಗಲಿಲ್ಲ. ಸೋತುವು, ನಾಚಿದುವು. ಕೊನೆಗೆ ಮೌನತಾಳಿದುವು.

ಶಿವನು ಮಹಾನಟ. ಆತ ನಾಟ್ಯವಾಡಿದರೆ ಏನಾಯಿತು ? ಸಂಗವಿಭುವಿನ ವಾಣಿಯಿಂದಲೇ ಕೇಳುವಾ :

ಮುಡಿಯೊಳ್ಮುಡಿದ ಪುಷ್ಪದಂತೆಯುಡುಸಂದೋಹಾಂ ಬಿದಿರ್ಚುತ್ತಿರಲ್
ಮಿಡಿಹಾವ್ಗಳ್ಜಡೆಯುಂ ಪಳಂಚಿ ಕುಡಿಮಿಂಚಿಂಗುರ್ಬಿಸಂ ಬೆರ್ಚಲೀ
ಗಡಣಂ ನೋಡಿ ನಡುಂಗೆ ಭೂಮಿಪದಘಾತಕ್ಕಿನ್ನು ನಿನ್ನಾಟದೀ
ದಿಡುಗಿಂಗೂದುವವರಾರು ಬಾರಿಸುವರಾರ್ಪಂಪಾಪುರಾಧೀಶ್ವರಾ

( ಪಂ. ಶ. ಪದ್ಯ ೪೪ )

ಶಿವನು ನಾಟ್ಯವಾಡಿದರೆ ತಲೆಯಲ್ಲಿ ಮುಡಿದ ಹೂವು ಕೆಳಗುದುರುವಂತೆ ಚುಕ್ಕೆಗಳು ಉದುರಿದವು; ಮಿಡಿಹಾವುಗಳು ಜಡೆಗೆ ಅಪ್ಪಳಿಸಿದರೆ ಕುಡಿಮಿಂಚಿಗೆ ಉಬ್ಬಸವಾಯಿತು. ಪದಘಾತಕ್ಕೆ ಭೂಮಿ ನಡುಗಿತು. ಇದು ಆತನ ಆಟ; ಭೂಮಿ ನಡುಗುವ, ನಕ್ಷತ್ರಗಳು ಉದುರುವ ಆಟ. ಆತನ ಈ ದಿಡುಗಿನ ಆಟಕ್ಕೆ, ಈ ದಿಡುಗಿನ ಕುಣಿತಕ್ಕೆ ಯಾರು ಊದಬೇಕು ? ಯಾರು ಬಾರಿಸಬೇಕು ? ಯಾರಿಗೆ ಸಾಧ್ಯವಿದೆ ಇದು ? ಕವಿಯು ಈ ಆಶ್ಚರ್ಯದ ಪ್ರಶ್ನೆಯಲ್ಲಿ ಶಿವನ ವಿರಾಡ್ರೂಪದ, ಆ ವಿರಾಟ್ ನರ್ತನದ ಚಿತ್ರ ಕಣ್ಣೆದುರಿಗೆ ಬರುತ್ತದೆ. "ದಿಡುಗು" ಎಂಬ ಶಬ್ದದ ಬಳಕೆಯಿಂದ ಕವಿ ಶಿವನ ಆ ನರ್ತನದ ರಭಸವನ್ನು ನಮ್ಮ ಆತ್ಮಕ್ಕೆ ಮಾಡಿಸುತ್ತಾನೆ.

ಶಿವನು ಎಷ್ಟೇ ಹಿರಿಯನಾದರೂ ಅವನು ಭಕ್ತಾಧೀನ. ಭಕ್ತರೇ ಅವನಿಗಿಂತ ಮಿಗಿಲೆನಿಸುವರು. ಈ ಮಾತಿನ ಸತ್ಯತೆಯನ್ನು ಸಂಗವಿಭು ನಮ್ಮ ಹೃದಯಕ್ಕೆ ಹೇಗೆ ಮುಟ್ಟಿಸುತ್ತಾನೆ, ನೋಡುವಾ :

ಬಡಿಚೆಂಡಾಡುವನದ್ರಿರಾಶಿಯ ಸಮುದ್ರಂ ನೋಡುತೋಚ್ಚಾರೆಯಿಂ
ಕುಡಿವಂ ಧಾರುಣಿಯಂತರಿಕ್ಷವವು ತಾಳಂಗೈವುತಂ ಬಾರಿಸಲ್
ಮೃಡ ನಿನ್ನಿಂದ ವಿಶೇಷವೆನ್ನಲು ಭವದ್ಭಕ್ತರ್ಗೆ ಸಾಟೀ ಬರೇ
ಬಡಿವಾರಂ ಬಲುದೊಡ್ಡದಾಂತೆಯುಭವಾ ಪಂಪಾಪುರಾಧೀಶ್ವರಾ

( ಪು. ಶ. ೬೮ )

ಭಕ್ತ ಬೆಟ್ಟಗಳನ್ನು ಬಡಿಚೆಂಡು ಮಾಡಿ ಆಡುವನು; ಸಮುದ್ರವನ್ನು ಒಂದು ಸೇರೆಯಲ್ಲಡಗಿಸಿ ಕುಡಿವನು; ಭೂಮಿ–ಆಕಾಶಗಳನ್ನು ತಾಳಮಾಡಿ ಬಾರಿಸುವನು. ಹೆಚ್ಚೇನು, ಆತ ಶಿವನಿಗಿಂತ ಶ್ರೇಷ್ಠ. ಶಿವನಲ್ಲಿರುವುದಾದರೂ ಏನು ? 'ಬರೇ

ಬಡಿವಾರ.' ಒಣ ಜಂಭ. ಈ ಬಡಿವಾರದಿಂದ ಆತ ಎಂದು ಯಾವ ಭಕ್ತರನ್ನು ಗೆದ್ದಿದ್ದಾನೆ ? ಯಾವ ಭಕ್ತನಿಗಿಂತ ಮಿಗಿಲೆನಿಸಿದ್ದಾನೆ ?

'ಬಡಿವಾರ' ಒಂದು ಸಾಮಾನ್ಯ ಶಬ್ದ. ಅದನ್ನಿಲ್ಲಿ ಕವಿ ಬಹು ಸಮರ್ಥವಾಗಿ, ಬಹು ಅರ್ಥಪೂರ್ಣವಾಗಿ ಬಳಸಿದ್ದಾನೆ. ಕೈಲಾಗದೆ ಒಣ ಜಂಭ ತೋರಿಸುವುದಕ್ಕೆ 'ಸೋಗುಲಾಡಿತನ' ಎನ್ನುತ್ತಾರೆ. ಬಡಿವಾರ ಎಂದರೆ ಈ ಸೋಗುಲಾಡಿತನ. ಇಂಥ ಸೋಗುಲಾಡಿತನದ ದರ್ಶನ ಮಾಡಿಸಿದ ಭಕ್ತ ಕವಿ ಸಂಗವಿಭು ನಿಜಕ್ಕೂ ಅವನಿಗಿಂತ ಹಿರಿಯ. ಸಾಮಾನ್ಯ ಶಬ್ದಗಳೂ ಒಮ್ಮೊಮ್ಮೆ ಕವಿಯಿಂದ ದೀಕ್ಷೆಪಡೆದು ಸತ್ವಯುತವಾಗುತ್ತವೆ, ಅರ್ಥವ್ಯಾಪ್ತಿ ಪಡೆಯುತ್ತವೆ. ಬೆಡಗು, ದಿಡುಗು, ಬಡಿವಾರ ಮುಂತಾದ ಶಬ್ದಗಳಿಗೆ ಸಂಗವಿಭು ದೀಕ್ಷೆಯಿತ್ತು ಅವುಗಳ ಅರ್ಥವ್ಯಾಪ್ತಿಯನ್ನು ಹೆಚ್ಚಿಸಿದ್ದಾನೆ. ಇಂಥ ದೇಸಿಯ ಬಳಕೆಯಿಂದ ಆತನ ಕಾವ್ಯಗಳು ರಸದಿಂದ ತುಂಬಿವೆ; ಚೆಲುವಿನಿಂದ ಕಳೆಯೇರಿವೆ.

## ಭಾಷೆ-ಶೈಲಿ-ಛಂದಸ್ಸು

ಸಂಗವಿಭು ಅನೇಕ ಪ್ರಾದೇಶಿಕ ಶಬ್ದಗಳನ್ನು ಬಳಸಿದ್ದಾನೆ. ದಲ್ಲು (ಸೈನ್ಯ), ಲಾಗು ( ಧಾನ್ಯರೂಪದ ಬಡ್ಡಿ ), ಪಿರ್ರೆಕಿಲ್ಲಣ, ರಡ್ಡಿ, ಗುಡಿಗಂಡಾರ, ಗಂಟಲಗಾಣ ಹೀಗೆ ಆತನ ಕಾವ್ಯಗಳಲ್ಲಿ ದಿನಬಳಕೆಯ ಶಬ್ದಗಳು ಬಳಕೆಯಾಗಿವೆ, ಬಹು ಅರ್ಥಪೂರ್ಣವಾಗಿ ಬಳಕೆಯಾಗಿವೆ. ಬೆಡಗು, ಬಡಿವಾರ, ದಿಡುಗು, ಲಂಡ, ಲಿಗಾಡಿ ಮುಂತಾದ ಶಬ್ದಗಳು ದೇಸಿಯ ಚೆಲುವನ್ನು ಹೆಚ್ಚಿಸಿ, ಕಾವ್ಯಕ್ಕೆ ಸತ್ವವಿತ್ತಿವೆ.

ಕವಿ ಕನ್ನಡ ಮತ್ತು ಸಂಸ್ಕೃತ ಎರಡೂ ಭಾಷೆಗಳಲ್ಲಿ ಪಾಂಡಿತ್ಯ ಪ್ರಭುತ್ವವುಳ್ಳವನಿದ್ದಾನೆ. ಪದ್ಯಗಳನ್ನು ಸಂಸ್ಕೃತಭೂಯಿಷ್ಠ ಮಾಡಬಲ್ಲ, ಅಚ್ಚಗನ್ನಡದಲ್ಲಿ ಬರೆಯಬಲ್ಲ; ಸಂಸ್ಕೃತ-ಕನ್ನಡಗಳನ್ನು ಹಿತಮಿತವಾಗಿ ಬೆರಿಸಬಲ್ಲ. ಹೇಗೆ ಬರೆದರೂ ಪದ್ಯಗಳು ಸುಂದರವಾಗಿರುತ್ತವೆ.

ಸಂಸ್ಕೃತ ಭೂಯಿಷ್ಠಕ್ಕೆ ಇದು ಉದಾಹರಣೆ :

ಷಡ್ವರ್ಗಾಚಲ ಜಂಭಭೇದಿ ವಿನಮತ್ಸಾಧುಪ್ರಮೋದಾಕರಾ
ವುದ್ವಿಟ್ಸನ್ನಿಭ ದಿವ್ಯಭೂತಿ ವಿಲಸದ್ವುದ್ವರ್ತನಾಂಗಾ ವೃಷಾ
ರುಡ್ವಿದ್ಯಾಧರ ಸಿದ್ಧಸಾಧ್ಯ ಘನ ಗಂಧರ್ವಾದಿ ಗಾನಪ್ರಿಯಾ
ಷಡ್ವರ್ಣಾತ್ಮಕ ಮೂರ್ತಿ ಪಾಲಿಸಭವಾ ಪಂಪಾಪುರಾಧೀಶ್ವರಾ
( ಪಂ. ಶ. ಪದ್ಯ ೯೩ )

ಅಚ್ಚಗನ್ನಡ ಶಬ್ದಗಳ ಸುಂದರ ಬಳಕೆಯಿಲ್ಲಿದೆ:

ತೊಗೆಯುಂಟಾದೊಡೆ ತುಪ್ಪಮೆಂಬ ನೆರೆತುಪ್ಪಂ ನೀಡಲೇನೀ ಬರೇ
ಯಗುಳೆಂತುಂಬುವೆನೆಂದು ಸಾರು ತರವೇಳಲ್ಕೆಂದು ನೀಡಲ್ಕೆ ಮ
ಜ್ಜಿಗೆ ಬೇಕೆಂಬುವನುಪ್ಪುಗೂಡಿ ಮನುಜಂಗೇನಿರ್ದರೇನಪ್ಪುದೇ
ಮಿಗೆ ತೃಪ್ತಿತ್ವಕೆ ಸಾಲದೆಂಬನಭವಾ ಪಂಪಾಪುರಾಧೀಶ್ವರಾ
(ಪಂ. ಶ. ಪದ್ಯ ೬೩)

ಕನ್ನಡ ಮತ್ತು ಸಂಸ್ಕೃತಗಳ ಹಿತಮಿತವಾದ ಬೆರಿಕೆಗೆ ಉದಾಹರಣೆ:

ಕಣ್ಣೆವೆಯಿಕ್ಕುವಾ ಸಮಯಮಾತ್ರವು ನಿಶ್ಚಲಭಾವದಿಂ ಭವ
ತ್ಪುಣ್ಯ ಕಥಾಮೃತಕ್ಕೆ ಕಿವಿಗೊಟ್ಟ ಮನುಷ್ಯನ ಪಾಪರಾಶಿ ನಿ
ರ್ವಿಣ್ಯತೆಯೊಂದಿ ಚಕ್ಕನುದುರಲ್ಕೊಗಮಾದುದು ದೀನಬಂಧು ಬ
ಲ್ಪಣ್ಣೆಲೆಯಂತೆ ಸತ್ವಭರಣಾ ಶರಣಾಗತವಜ್ರಪಂಜರಾ
(ಬ. ಶ. ಪದ್ಯ ೨೦)

ಸಂಗವಿಭುವಿನ ಶೈಲಿ ಬಂಧುರವೂ ಲಲಿತವೂ ಆಗಿದೆ. ಸತ್ವ, ಶಕ್ತಿ, ಶೀಲ, ಮಾರ್ದವತೆ, ತೀಕ್ಷ್ಣತೆ– ಆತನ ವ್ಯಕ್ತಿತ್ವದ ಈ ಗುಣಗಳ ಒಂದು ಸುಂದರ ಸಮ್ಮಿಳನ ಆತನ ಶೈಲಿ ಪಡಿಮೂಡಿಸುತ್ತದೆ.

ಸಂಗವಿಭುವಿನ ಕಾವ್ಯಗಳಲ್ಲಿ ಐದು ಪಾದಗಳ ವೃತ್ತಗಳಿವೆ. ಬಸವಶತಕದಲ್ಲಿ ೧ (ಚಂಪಕ), ಪಂಪಾಶತಕದಲ್ಲಿ ೨ (ಮತ್ತೇಭ ವಿಕ್ರೀಡಿತ ಮತ್ತು ಶಾರ್ದೂಲ ವಿಕ್ರೀಡಿತ), ಭುವನೈಕನಾಯಕೀ ಶತಕದಲ್ಲಿ ೪ (ಒಂದು ಚಂಪಕ ಮತ್ತು ಮೂರು ಉತ್ಪಲ) ಐದುಪಾದಗಳ ವೃತ್ತಗಳಿವೆ. ಕುಮಾರವಿಜಯದಲ್ಲಿಯೂ ಇಂಥ ಕೆಲವು ವೃತ್ತಗಳಿವೆ. ಈ ಪ್ರಯೋಗದಿಂದ ಹಿಂದೆ ಐದುಪಾದಗಳ ವೃತ್ತಗಳಿದ್ದಿರಬಹುದೆಂದು ಊಹಿಸಲು ಅವಕಾಶವಿದೆ. ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿಗೆ ಸೇರಿದ ಕವಿತಾಳದ ತ್ರ್ಯಂಬಕೇಶ್ವರ ದೇವಾಲಯದಲ್ಲಿರುವ ಶಾಸನದಲ್ಲಿ ಐದು ಪಾದಗಳ ಒಂದು ವೃತ್ತವಿದೆ[೧]. ಈ ಶಾಸನ ಕ್ರಿ. ಶ. ೧೩ ನೆಯ ಶತಮಾನದ್ದು. ಕ್ರಿ. ಶ. ೧೪೯೦ ರಲ್ಲಿದ್ದ ಕವಿಲಿಂಗ ಎಂಬ ಕವಿಯ ಕವಿಲಿಂಗನ ಪದಗಳು ಎಂಬ ಗ್ರಂಥದಲ್ಲಿ ಒಂದು ಚಂಪಕಮಾಲೆ, ಇನ್ನೊಂದು ಉತ್ಪಲಮಾಲೆ ಹೀಗೆ ಎರಡು ಐದುಪಾದಗಳ ವೃತ್ತಗಳಿವೆ. [೨]ಇವೆರಡು ಕವಿಯ ಪ್ರಯೋಗಕ್ಕೆ ಪೋಷಕವಾಗಿವೆ.

ಸಂಗವಿಭುವಿನ ನಾಲ್ಕೂ ಕಾವ್ಯಗಳಲ್ಲಿ ರಳ ಮತ್ತು ಶಕಟ ರೇಫಗಳ ಪ್ರಯೋಗವಿಲ್ಲ. ಕವಿಯು ಇವುಗಳನ್ನು ಪ್ರಯೋಗಿಸಿದ್ದಾನೋ ಇಲ್ಲವೋ ತಿಳಿಯುವುದಿಲ್ಲ. ಕವಿಯ ಹಸ್ತಾಕ್ಷರ ಪ್ರತಿ ನಮಗೆ ದೊರಕಿಲ್ಲ. ನಮಗೆ ದೊರೆತ ಕೈಬರಹದ ಪ್ರತಿಗಳ ಕಾಗದಗಳನ್ನು ನೋಡಿದರೆ ಅವು ಕವಿಯಿಂದ ೩೦, ೪೦ ವರ್ಷ ಈಚಿನವೆಂದು ಹೇಳಬಹುದು. ಅವುಗಳಲ್ಲಿ ಇವುಗಳ ಪ್ರಯೋಗವಿಲ್ಲ.

---

೧ ರಾಯಚೂರು ಜಿಲ್ಲೆಯ ಶಾಸನಗಳು : ರಾಯಚೂರು ಕರ್ನಾಟಕ ಸಂಗದ ಬೆಳ್ಳಿಹಬ್ಬದ ಸಂಚಿಕೆ, ಪುಟ ೫೧.

೨ ರಾ. ಬ. ನರಸಿಂಹಾಚಾರ್ಯ : ಕರ್ನಾಟಕ ಕವಿಚರಿತ್ರೆ ಸಂಪುಟ ೨, ಪುಟ ೧೩೭.

## ಕವಿಯ ಹೆಚ್ಚಳ

ಗಣೇಕಲ್ ಸಂಸ್ಥಾನವು ಚಿಕ್ಕದಾದರೂ ಕೆಚ್ಚುಕಲಿತನಗಳಿಗೆ, ನೀತಿ-ಧರ್ಮಗಳಿಗೆ ಹೆಸರಾದುದು. ಪರಕೀಯರ ಆಡಳಿತದಲ್ಲಿಯೂ ಕಷ್ಟಕಾಲದಲ್ಲಿಯೂ ಈ ಸಂಸ್ಥಾನಿಕರು ಲಿಂಗವಂತ ಧರ್ಮವನ್ನು, ಸಂಸ್ಕೃತಿಯನ್ನು ಉಳಿಸಿ ಬೆಳಿಸಿಕೊಂಡು ಬಂದರು; ಸಾಹಿತ್ಯ ಮತ್ತು ಕಲೆಗಳಿಗೆ ಪ್ರೋತ್ಸಾಹವಿತ್ತರು.

ಸಂಗವಿಭು ಈ ಸಂಸ್ಥಾನಕ್ಕೆ ಇನ್ನಷ್ಟು ಕೀರ್ತಿಯನ್ನು ತಂದ. ಆತನು ಅಸಾಮಾನ್ಯ ಪಂಡಿತನೂ ಅಸಾಧಾರಣ ಪ್ರತಿಭಾವಂತನೂ ಸಕಲ ಶಾಸ್ತ್ರಕೋವಿದನೂ ಆಗಿದ್ದನು. ಆತನ ಹೆಸರು ಈ ಭಾಗದಲ್ಲಿ ಇನ್ನೂ ಹಚ್ಚಹಸುರಾಗಿದೆ. ಆತನ ಶತಕಗಳನ್ನು ಹಳ್ಳಿಗಳಲ್ಲಿ ಇಂದಿಗೂ ಬಾಯಿಪಾಠ ಮಾಡುವ ರೂಢಿಯಿದೆ. ಆತ ಪ್ರತ್ಯುತ್ಪನ್ನಮತಿಯಾಗಿದ್ದ. ವೀರನೂ ಸಾಹಸಿಯೂ ಆಗಿದ್ದ. ಆತನ ಜೀವನಕ್ಕೆ ಸಂಬಂಧಿಸಿದ ಅನೇಕ ಕಥಾಸಂಗತಿಗಳು (Anecdotes) ಪ್ರಚಾರದಲ್ಲಿವೆ. ಈ ಕಥಾಸಂಗತಿಗಳಿಂದ ಆತನ ಜಾಣ್ಮೆ, ಪಾಂಡಿತ್ಯ, ಸಮಯಕ್ಕೆ ತಕ್ಕ ನಡೆ ಮುಂತಾದುವು ಗೊತ್ತಾಗುವುವು. ಒಂದು ಕಥಾಸಂಗತಿ ಹೀಗಿದೆ:

ಸುರಪುರಕ್ಕೆ ಒಂದು ಸಾರೆ ಒಬ್ಬ ಜಂಗಮ ಬಂದ. ಆತ ಬಹಳ ನೀರಡಿಸಿದ್ದ. ಊರಹೊರಗೆ ಒಂದು ಬಾವಿ. ಆತ ಅದರಲ್ಲಿಳಿದು ನೀರು ಕುಡಿದ. ಮೇಲೆ ಬಂದ ಬಳಿಕ ಅದು ಮಾದಿಗರ ಬಾವಿ ಎಂದು ತಿಳಿಯಿತು. "ಅಯ್ಯೋ, ನನ್ನ ಕುಲ ಕೆಟ್ಟಿತು. ಇನ್ನೇನು ಗತಿ ? ಇಲ್ಲಿಯೇ ಕುಳಿತು ಅನ್ನನೀರಿಲ್ಲದೆ ಪ್ರಾಣಬಿಡುವೆ" ಎಂದು ಬಾವಿಯ ದಂಡೆಯ ಮೇಲೆ ಕುಳಿತುಬಿಟ್ಟ ಆ ಜಂಗಮ. ಜಂಗಮ ವ್ಯರ್ಥವಾಗಿ ಸಾಯುವನೆಂದು ಊರವರು ನಾನಾ ರೀತಿಯಾಗಿ ತಿಳಿಸಿ ಹೇಳಿದರು. ಶುದ್ಧಿ ಮಾಡಿಕೊಂಡರೆ ಸರಿಹೋಗುವುದೆಂದು ಊರಿನ ಮಠದವರು ಹೇಳಿದರು. ಜಂಗಮ ಕೇಳಲಿಲ್ಲ. ಸುರಪುರದ ದೊರೆಗಳ ಕಿವಿಗೆ ಈ ಸುದ್ದಿ ಮುಟ್ಟಿತು. ಅವರೂ ಬಂದು ತಿಳಿಸಿ ಹೇಳಿದರು. ಜಂಗಮ ಒಪ್ಪಿಯ್ಯ ಎನ್ನಲಿಲ್ಲ. ದೊರೆಗಳಿಗೆ ಚಿಂತೆ ಆವರಿಸಿತು. ಆಗ ಅವರಿಗೆ ಗಣೇಕಲ್ ಸಂಗವಿಭುವಿನ ನೆನಪು ಬಂದಿತು. ಕೂಡಲೇ ದೊರೆಗಳು ಆತನನ್ನು ಕರೆತರಲು ಅಶ್ವಾರೋಹಿಯನ್ನು ಕಳಿಸಿದರು.

ಸಂಗವಿಭು ಬರಲು ಮೂರು ದಿನಗಳು ಹಿಡಿದುವು. ಜಂಗಮ ನಿತ್ರಾಣನಾಗಿದ್ದ. ಸುರಪುರದ ದೊರೆಗಳೊಡನೆ ಸಂಗವಿಭು ಜಂಗಮನಲ್ಲಿಗೆ ಬಂದ. ಜನ ಜಂಗುಳಿ ನೆರೆಯಿತು.

---

೧. ೧೩೦ ಹಳ್ಳಿಗಳು ಈ ಸಂಸ್ಥಾನದಲ್ಲಿದ್ದುವು. ಪೂರ್ವಕ್ಕೆ ನಾರಣಗಡ್ಡೆ ಕಡೆಹಳ್ಳಿ, ಪಶ್ಚಿಮಕ್ಕೆ ಅರಿಕೇರಿ ಕಡೆಹಳ್ಳಿ ಆಗಿದ್ದುವು.

"ಜಂಗಮರೇ, ನೀವು ಬಾವಿಯಲ್ಲಿ ಹೇಗೆ ಇಳಿದಿರಿ ? ಮೊದಲು ನೀರಿನಲ್ಲಿ ಕಾಲನ್ನಿಟ್ಟಿರೋ ಅಥವಾ ಕೈಯನ್ನಿಟ್ಟಿರೋ ?" ಸಂಗವಿಭು ಜಂಗಮನನ್ನು ಕೇಳಿದ.

"ನೀರಲ್ಲಿ ಮೊದಲು ಕಾಲನ್ನಿಟ್ಟೆವು" ಜಂಗಮನೆಂದ.

"ಹಾಗಾದರೆ ಮುಗಿಯಿತಲ್ಲ, ಹೊಲೆ ಎಲ್ಲಿ ಉಳಿಯಿತು ?" ಎಂದ ಸಂಗವಿಭು.

ಜಂಗಮನಿಗೆ ಅರ್ಥವಾಗಲಿಲ್ಲ. ನೆರೆದ ಜನಕ್ಕೂ ಅರ್ಥವಾಗಲಿಲ್ಲ. ಸಂಗವಿಭು ಮತ್ತೆ ನುಡಿದ:

"ಜಂಗಮನ ಪಾದ ಪವಿತ್ರವಾದುದು. ಅದು ಎಲ್ಲಿ ಬೀಳುವದೋ ಆ ವಸ್ತು, ಆ ಸ್ಥಳ ಎಲ್ಲ ಪವಿತ್ರವಾಗುವುವು. ಇದನ್ನು ನಂಬುವಿರಾ, ಜಂಗಮರೆ?"

"ನಂಬುವೆ" ಜಂಗಮನ ಉತ್ತರ.

"ನೀವು ನೀರಲ್ಲಿ ಮೊದಲು ಇಟ್ಟದ್ದು ನಿಮ್ಮ ಪಾದ. ನೀವು ಜಂಗಮರು; ನಿಮ್ಮ ಪಾದ ಪವಿತ್ರ. ನೀವು ಪಾದವಿಟ್ಟದ್ದು ಪವಿತ್ರವಾಗಬೇಕು. ನಿಮ್ಮ ಪಾದ ದಿಂದ ಈ ಬಾವಿಯ ನೀರು ಪಾದತೀರ್ಥವಾಯಿತು. ಆ ಪವಿತ್ರ ನೀರನ್ನೇ ನೀವು ಕುಡಿದಿರಿ. ಇನ್ನು ಹೊಲೆತನವೆಲ್ಲಿ ? ನಿಮ್ಮಿಂದ ಇದೀಗ ಇದು ಹೊಲೆಯರ ಬಾವಿಯಾಗಿ ಉಳಿದಿಲ್ಲ; ದೊಡ್ಡ ಕುಲದವರ ಬಾವಿಯಾಯಿತು. ಇದನ್ನು ತಿಳಿಯದೆ ಸಾಯಲು ನಿಶ್ಚಯಿಸಿರುವಿರಲ್ಲಾ ! ನಿಮ್ಮ ಮರೆವಿಗೆ ಏನೆನ್ನಬೇಕು ?" ನುಡಿದ ಸಂಗವಿಭು.

ಜಂಗಮನ ಮೊಗದಲ್ಲಿ ನಗೆ ತುಳುಕಿತು. ನೆರೆದ ಜನಕ್ಕೆ ಆದ ಸಂತೋಷ ಅಷ್ಟಿಷ್ಟಲ್ಲ. ಸುರಪುರದ ದೊರೆಗಳು ಹಿಗ್ಗಿದರು; ಸಂಗವಿಭುವಿನ ಜಾಣ್ಮೆಯನ್ನು ಕೊಂಡಾಡಿದರು. ಜಂಗಮ ಬದುಕಿದ; ಜೊತೆಗೆ ತಾನು ಮರೆತ ತತ್ವವನ್ನು ಸಂಗ ವಿಭುವಿನಿಂದ ಕಂಡುಕೊಂಡ.

ಸಂಗವಿಭು ಬದುಕಿದ ಕಾಲ ಕೋಲಾಹಲದ ಕಾಲ, ಅಶಾಂತಿಯ ಕಾಲ. ಭಾರತ ವನ್ನು ನುಂಗಲು ಬ್ರಿಟಿಷರು ಹೊಂಚುಹಾಕಿ ಗೊಂದಲವೆಬ್ಬಿಸಿದ ಕಾಲ. ದಕ್ಷಿಣ ಭಾರತ ಬೇಯುತ್ತಿತ್ತು; ಕನ್ನಡನಾಡು ಕಿಚ್ಚಿದ್ದು ಉರಿಯುತ್ತಿತ್ತು. ಕಿತ್ತೂರನ್ನು ಆಂಗ್ಲರು ಕಬಳಿಸಿದ್ದರು. ಮುಂಡರಗಿ, ನರಗುಂದ, ಬೆಳಗಾಂವಿ, ಬಳ್ಳಾರಿಗಳಲ್ಲಿ ಆಂಗ್ಲರ ವಿರುದ್ಧ ಒಳಗೊಳಗೇ ಸಂಚು ನಡೆದಿತ್ತು. ಸುರಪುರ ಬ್ರಿಟಿಷರ ವಿರುದ್ಧ ಶಕ್ತಿಸಂಚಯಿಸುತ್ತಿತ್ತು. ಆಂಗ್ಲರು, ಅವರಿಗೆ ನೆರವಾಗಿ ನಿಂತ ನಿಜಾಮ ವರಿಬ್ಬ ರಿಂದ ಈ ಭಾಗ ತತ್ತರಿಸಿತ್ತು. ಗಣೇಕಲ್ಲಿನಂಥ ಚಿಕ್ಕಪುಟ್ಟ ಸಂಸ್ಥಾನಗಳೂ ಸುಮ್ಮನೆ ಕುಳಿತಿರಲಿಲ್ಲ; ಸುಮ್ಮನೆ ಬ್ರಿಟಿಷರಿಗೆ ಶರಣುಹೋಗಲು ಅವು ಸಿದ್ಧವಿರಲಿಲ್ಲ.

ಸುತ್ತ ಮುತ್ತ ಯುದ್ಧ, ತುಪಾಕಿಗುಂಡುಗಳ ಶಬ್ದ. ಧರ್ಮ ದೇವರು ಎಲ್ಲವನ್ನೂ ಮರೆತ ಕಾಲವದು. ರಸಿಕತೆ, ಸಂಗೀತ, ಸಾಹಿತ್ಯಗಳನ್ನು ಅಂಥ ಕಾಲದಲ್ಲಿ ಯಾರು ಕೇಳಬೇಕು !? ಎಲ್ಲರಿಗೂ ಜೀವದ ಭಯ; ಹಸಿವಿನ ಬಾಧೆ; ಮರ್ಯಾದೆಯ ಪ್ರಶ್ನೆ. ವೈರಿಗಳ ಉಪಟಳ, ಹಿತಶತ್ರುಗಳ ಕಾಟ. ಯಾವ ಸಮಯಕ್ಕೆ ಏನಾಗುವುದೋ ತಿಳಿಯದು. ಇಂಥ ಕಾಲದಲ್ಲಿ ಸಂಗವಿಭು ಕುಮಾರವಿಜಯದಂಥ ಮಹಾಕಾವ್ಯವನ್ನೂ ಮೂರು ಶತಕಗಳನ್ನೂ ರಚಿಸಿದ. ಧರ್ಮ ನಿಲ್ಲಿಸಿದ, ಸಾಹಿತ್ಯವನ್ನು ಎತ್ತಿದ. ಆತ ಮಹಿಮ. ಧೀಶಕ್ತಿ, ತೋಳ್ ಶಕ್ತಿ ಎರಡೂ ಉಳ್ಳಾತ. ಸಂಗವಿಭುವಿನಂಥವರು ಶತಮಾನಕೊಬ್ಬರು ಹುಟ್ಟಿ ಬರುತ್ತಾರೆ.

ರಾಯಚೂರು — **ಶಾಂತರಸ**

ಆಗಸ್ಟ್ ೧೯೭೩

॥ ಶ್ರೀಗುರುಬಸವಲಿಂಗಾಯನಮಃ ॥

೧

ಶ್ರೀಮದನಂತಪೂರ್ಣಗುಣರತ್ನಸಮಾಹಿತ ಮಾರಭಿನ್ನತೋ
ದ್ಧಾಮಂ ಪಯೋಧಿಯಂ೧ ಬಿಡದೆ ಪೆರ್ಚಿಸಲೀ ನವಭಕ್ತಿಚಂದ್ರಿಕಾ
ಶ್ರೀಮಯಲೋಕನಾಥ ಬಸವಾ ಬಸವಾ ಪೊರೆಯೆನ್ನ ಶೈವಚೂ
ಡಾಮಣಿ ನಿತ್ಯಶುದ್ಧಕರಣಾ ಶರಣಾಗತವಜ್ರಪಂಜರಾ

೨

ಶ್ರೀಗುರುಲಿಂಗಜಂಗಮ ಸಪರ್ಯಸಮಾಧಿ ವಿಶೇಷ ಸಾಧನೋ
ದ್ಯೋಗವಿಸರ್ಜನಂ ಕನಸಿನೊಳ್ಮಗದೋರದೆ ಲೋಕಲೀಲೆಯಂ
ಸಾಗಿಸಿತೋರ್ಪ ಬಲ್ಲಿದರೊಳಗ್ರಜನಾಗಿ ಶಿವಾನುಭೂತಿಯಿಂ
ತೂಗದೆ ಬಾಳ್ವ ಚಿತ್ತಕರಣಾ ಶರಣಾಗತವಜ್ರಪಂಜರಾ

೩

ಆದಿಯೊಳಂಬಿಕಾರಮಣನಪ್ಪಣೆಯಿಂ ತದನೂನಭಕ್ತಿ ಸಾ
ರೋದಯ ನಿಷ್ಠೆಯಂ ೨ಬಳೆಸಿ೨ ದುರ್ಮತರಂ ಜರೆದೇಕಮಾರ್ಗ ಸಂ
ಪಾದನ ಭಾಗ್ಯಮಂ ನೆರವಲೀ ನೆಲಮಂ ಕುರಿತೊಮ್ಮೆ ಮಾದಲಾಂ
ಬೋದರಜಾತನಾದ ಶರಣಾ ಶರಣಾಗತವಜ್ರಪಂಜರಾ

೪

ನರಪತಿಯಂಗಣಂ ಬಳಸಿಯಾಗಸದಿಂದರೆಯೊಂದು ದೇವತಾ
ಕ್ಷರಮಯವಾಗಿ ಬಿರ್ದಡದನೋದಿಸಲಾರಿಗೆ ಬಾರದಾಗಲಾ
ಪರಿಯ ಲಿಪಿ೩ಪ್ರಮಾಣ೩ವನು ಪೇಳಿ ತದರ್ಥಗತಾರ್ಥಲಾಭಮಾ
ದೊರೆಗನುಗೈದ ಪೂಜ್ಯಚರಣಾ ಶರಣಾಗತವಜ್ರಪಂಜರಾ

೫

ಭವಿಗಳು ಭಕ್ತರಾಗಿ ಗುರುಲಿಂಗ ಚರಾರ್ಚನೆಯಲ್ಲಿ ನಿಷ್ಠೆ೪ಯಿಂ೪
ತವೆ ೫ಬಲಿವಾತ್ಮ೫ಸಿದ್ಧಿಗೆ ಕೃತಾಂತ ಸುಮಾಸ್ತ್ರಜಯಕ್ಕೆ ಕಾರಣಂ
ಭವದವತಾರವಲ್ತೆ ನೆರೆಯಾಲಿಸಿ ನಿಮ್ಮವನೆಂಬೆ ಪಾಲಿಸಯ್
ಶಿವಮತಸಿಂಧು ಶೀತಕಿರಣಾ ಶರಣಾಗತವಜ್ರಪಂಜರಾ

---

೧ ಪಯೋನಿಧಿಯಂ (ಶಿ)    ೨ ಬೆಳಸಿ (ಶಿ)    ೩ ಪ್ರಮಾನ (ಶಿ)
೪ ಯಿಂ (ಜ)    ೫ ಚಲಿಪಾತ್ಮ (ಶಿ)

೬

೧ನಡೆಸುವಂ೧ ನಿತ್ಯ ನೇಮದೊಳು ೨ಸಾಲದೆ೨ ಜಂಗಮರನ್ಯದೇಶದೊಳ್
ತೊಡಕಿರಲಾರು ಸಾಸಿರವು ಸೆಟ್ಟಿಯು ವೇಷದಿ ಪೋಗಿ ವೇಗದಿಂ
ಬಿಡದೊಡನೈದಿಸುತ್ತೆ ಪರಿಪೂರ್ಣ ಚರಾರ್ಚನೆ೩ಯುಪ್ಪ೩ ಭಕ್ತಿಯಿಂ
ಸಡಲದಲಿಪ್ಪ ಶುದ್ಧ ಕರಣಾ ಶರಣಾಗತವಜ್ರಪಂಜರಾ

೭

ಅರಸಿನ ಪೋಸದಪ್ಪಣೆಯೊಳಂಗನೆಯರ್ಕೆಲರೊಮ್ಮೆ ಜಂಗಮಾ
ಚರಣೆಯ ವೇಷದಿಂ ಪಸಿದೆಳವರ್ಪಣ೪ಕ್ಕೈದೆವೆನು೫ತ್ತ೫ ಬಂದಡಾ
ದರಿಸಿ ಹಸಾದಮೆನ್ನಲವರೊಳ್ಚರಭಾವವನಿತ್ತು ಪೆಣ್ತನಂ
ಮರೆಸಿದ ಮಾನ್ಯ ಸತ್ವಭರಣಾ ಶರಣಾಗತವಜ್ರಪಂಜರಾ

೮

ಜಿನಕುಲದಲ್ಲಿಯೊರ್ವನಿಗೆ ೬ದೈವಕದಿಂ೬ ತನುಮುಕ್ತಿಯಾಗಲಾ
ತನ ಸತಿ ಬಂದು ೭ಚೆನ್ನಡಿ೭ಗಳಿಂಗೆರಗಲ್ಪರಸುತ್ತಲೈದೆಯಾ
ಗೆನೆ ನೆರೆದೆಲ್ಲರಲ್ಲಿ ಬೆರಗಾಗಲವಂಗಸುವಿತ್ತ ಮೃತ್ಯುಮ
ರ್ದನ ದಯ೮ವಾ೮ಗು ದೀನಭರಣಾ ಶರಣಾಗತವಜ್ರಪಂಜರಾ

೯

ಅರಮನೆ ಕೋಣೆಯೊಳ್ಬರೆಸಿ ಜಂಗಮರೂಪಗಳೆಲ್ಲ ಚಿತ್ರದಿಂ
ನರಪತಿಯೊಮ್ಮೆ ಕೇಳು ಬಸವಾ ಕರೆದೊಯ್ಯದೆ ಗೋಡೆಯಲ್ಲಿ ಬಿ
ಟ್ಟರೆ ಮಿಗಿಲೇನು ನಿಮ್ಮ ಚರರೆಂತೆನಲಾಕ್ಷಣ೯ವೊಪ್ಪಿ೯ ನಿಷ್ಠೆಯಿಂ
೧೦ಬರಸೆಳೆ೧೦ಂಕೊಂಡ ೧೧ಭಕ್ತ೧೧ಭರಣಾ ಶರಣಾಗತವಜ್ರಪಂಜರಾ

೧೦

ಧಾರುಣಿಯಲ್ಲಿ ಬಿಜ್ಜಳ ನರೇಶನ ಪತ್ತನಮುಂ ವಿನೋದದಿಂ
ಸಾರಿ ಶಿವಾಧಿಕಪ್ರಮಥಸಿದ್ಧಿಯೊಡರ್ಚುತ ನಿತ್ಯ೧೨ದ೧೨ಲ್ಲಿ ಮು
ನ್ನೂರರವತ್ತು ಲೆಕ್ಕದ ಮಹಾತ್ಮೆಗಳಂ ಪರವಾದಿಗಳ್ಗೆ ಸೈ
ದೋರಿದ ನಿರ್ಮಲಾಪ್ತಭರಣಾ ಶರಣಾಗತವಜ್ರಪಂಜರಾ

---

೧ ನಡಸುವ (ಶಿ) ೨ ಸೋಲದೆ (ಶಿ) ೩ ಯೊಪ್ಪ (ಮ) ೪ ವಾರ್ಪಣ (ಶಿ)
೫ ತ್ತೆ (ಮ) ೬ ದೈವಿಕ (ಶಿ) ೭ ತನ್ನಡಿ (ಶಿ) ೮ ನಾ (ಶಿ) ೯ ಮೊಪ್ಪೆ (ಶಿ)
೧೦ ಬರಿಸಿ (ಶಿ) ೧೧ ಭಕ್ತಿ (ಮ) ೧೨ ರ (ಶಿ)

೧೧

ಬೀದಿಯೊಳೊಂದು ಪಾವಿಗಸುವಿಲ್ಲದೆ ಬಿದ್ದಿರಲಾಗ ಹಾಸ್ಯದಿಂ
ವಾದಿಗಳೀಶ್ವರಾಭರಣಕೀಗತಿ[೧]ಯಿಂ[೧] ನೊಣಮುತ್ತಲಾದವೆಂ
ಬಾ ದುರುಳೋಕ್ತಿಗಾಗಿ ನೆರೆ ದಿಟ್ಟಿಸಿ ತೋರಿದೆ ತದ್ಭುಜಂಗ ಜೀ
ವೋದಯುವನ್ನು ಶುದ್ಧಕರಣಾ ಶರಣಾಗತವಜ್ರಪಂಜರಾ

೧೨*

ಕುಶಪಥಕರ್ಕಶರ್[೨] ನಿಗಮತಂತ್ರ ಪುರಾಣಗಳರ್ಥ ಸಿದ್ಧಿಯಿಂ
ಪಶುಪತಿ ಯಾವ ಹೇತುವು ಚರಾಚರ [೩]ಸೇವೆಯನೇಕೆ[೩] ಮಾಡಿದರ್
ದಶಪದಳವಾದಳದಿಂದಲುಸುರೆಂದಿದಿರಾಗೆ ಸಮಸ್ತ ವಿದ್ಯೆಗಳ್
ಪಶುವಿನ ಬಾಯಲೋದಿಸಿದ ಪಕ್ಷಕೆ ಸೋತೆರಗುತ್ತೆ ತಜ್ಜನರ್
ವಶರೆನೆ ಪೋಷಿಪಾರ್ತಭರಣಾ ಶರಣಾಗತವಜ್ರಪಂಜರಾ

೧೩

ಗುರುಕುಲಪುಂಗವಂ ಮನೆಗೆ ಬಂದಡೆ ಪೂಜಿಸುತಿರ್ದು ಲಿಂಗವಂ
ಬೆರೆಸಿದ ಸಂಗವಂ ಕರಗಿ [೫]ಬೇಗದೊಳಾ[೫]ಚರಪಾದಕಂಗವಂ
ನೆರಹಿಸಿ ತುಂಗವಂಚನ ಗುಣಾಶ್ರಿತ ದುರ್ಭವಮೂಲ ಭಂಗವಂ
ಧರೆಯೊಳು ಮಾಡಿದಾಪ್ತಭರಣಾ ಶರಣಾಗತವಜ್ರಪಂಜರಾ

೧೪

ನೆರವಿದ ಭೂರಿ ಭೋಜನ ಪದಾರ್ಥ ವಿಶೇಷಗಳೆಲ್ಲವೆಲ್ಲಮಂ
ತರಿಸಿ ಶಿವಾರ್ಪಣಕ್ಕುಚಿತಮಾಗಿದೆ [೬]ಯಾವುದು[೬] ಸಾಲದೆಂದಡಿ
ನ್ನರಸುವುದೇನೆನುತ್ತ ತನುವರ್ಪಿಸಿ ಸದ್ಗುರು ಶಾಂತಿಯನ್ನು ಸಾ
ದರದಲಿ ಮಾಡಿದಾಪ್ತಭರಣಾ ಶರಣಾಗತವಜ್ರಪಂಜರಾ

೧೫

ಶಂಕರವಿಗ್ರಹಂ ಮರುಳಶಂಕರದೇವನ ಚಿತ್ಪ್ರಸಾದ ಶೇ
ಷಂ ಕಡುನಂಬಿದರ್ಗೆ ಪರಮಾರ್ಥವಿಧಾಯಕ ವಸ್ತುವೆಂದು ಬಂ
ದುಂ ಕೆಲಕಾಲವೆಂಜಲೆನದಾ[೭]ಸ[೭]ರಗೊಂಡು ಭವತ್ಸುಖೋದಯಾ
ಭ್ಯಂಕಿತನೆಂದನೇಕಕರಣಾ ಶರಣಾಗತವಜ್ರಪಂಜರಾ

---

೧ ಯೇಂ (ಮ) * ಈ ವೃತ್ತದಲ್ಲಿ ಐದು ಪಾದಗಳಿವೆ. ನೋಡಿರಿ : ಪ್ರಸ್ತಾವನೆ ಪುಟ ೩೯
೨ ಶಂ (ಮ) ೩ ಸೇವೆಗನೇಕ (ಮ), ವೇನಿದನ್ಯಾಕೆ (ಶಿ) ೪ ಮಂದ (ಮ)
೫ ಬ್ಯಾಗದಲಾ (ಶಿ) ೬ ಯಾದಡು (ಮ) ೭ ನೆ (ಶಿ)

೧೬

ಭೂಪತಿ ಕೇಳಲೊಮ್ಮೆ ಬಸವಾ ನಮಗೇಂ ಶರಣಾರ್ಥಿಯೆನ್ನದೇ
ನೋ ಪಡಿಯುಂಗುರಕ್ಕೆನುವಿರಂತೆನುತುಂ ಬರಿಗೈಯಲೊಂದಿಸು
ತ್ತೋಪ ತದಾಸನೋಪಗತ ಧಾನ್ಯವ ಚುರ್ಚಿ ವಿರೋಧಿ ಗರ್ವ ನಿ
ರ್ವಾಪಣಧರ್ಮಮಾಂತ[1]ಂ ಶರಣಾ ಶರಣಾಗತವಜ್ರಪಂಜರಾ

೧೭

ಪಲ್ಲವನಂತೆ ಬಂದು ಚರನೊರ್ವನು ನಿಂಬೆಯನಿತ್ತು ನಿಂಬೆ ತ
ಪ್ಪಲ್ಲ ವನೇಜನೇತ್ರೆ ಶಿವಲಿಂಗವಿದೆನ್ನಲು ಕೊಂಡು ಸೂಳೆಯಾ
ವಲ್ಲ ಭವಿಪ್ರಸಕ್ತಿಯುವರೆಂದೊಡೆ ವಸ್ತುವ ತೋರಿಕೊಟ್ಟು ಭೂ
ವಲ್ಲಭನಲ್ಲಿ ಗೆದ್ದ ಶರಣಾ ಶರಣಾಗತವಜ್ರಪಂಜರಾ

೧೮

ಕಿಟ್ಟದ ಗೊಂಬೆಯಂ ಮಲಗಿಸೀ ಬಸವಣ್ಣ ಚರಂ ನಿಜಾಂಗವಿ
ಲ್ಲಿಟ್ಟಡೆಯೂಣೆಯಲ್ಲವೆ ಮಹಾತ್ಮೆಗೆನಲ್ಜಿ ನರಾಗ ಚೇತನಂ
ಪುಟ್ಟಿಸಿ ತೋರಿ ತತ್ಕೃತಿಮೆಯುಂ ಶಿವಮೂರ್ತಿಯ ಮಾಡುತೆಬ್ಬಿಸ
ಲ್ದಿಟ್ಟರು ನೀವೆ ಲೋಕಭರಣಾ ಶರಣಾಗತವಜ್ರಪಂಜರಾ

೧೯

ಸಾಲಿಯು ಚಿಕ್ಕಪಂ ಪಲಗೆಯುಂ ತೊಳೆವುತ್ತಿರೆ ಭಾವಿಯಲ್ಲಿ ತ
ತ್ಕಾಲದಿ ಕಾಲುಜಾರಿ ಮುಳುಗಲ್ಜ ಲದೊಲ್ಲಿಸುವಿಲ್ಲದಾಗಲಾ
ಬಾಲಕನಪ್ಪನವ್ವೆಯರು ಬಂದೆರಗಲ್ಕವನಿಂಗೆ ಜೀವಮಂ
ಪಾಲಿಸಲಾದೆ ಸತ್ವಕರಣಾ ಶರಣಾಗತವಜ್ರಪಂಜರಾ

೨೦

ಊರೊಳಗೊಬ್ಬವಳ್ತಲೆಯು ಕೂದಲನಾರಿಸುತಿರ್ದು[2] ಸೂರನಂ
ಸಾರದಿರೆನ್ನಲೊಮ್ಮೆಯುಪರಾಂಬುಧಿಯಂ ನೆರೆ ಕೇಳದಾದಡಾ
ಸಾರಸಮಿತ್ರನಂ ತಡೆಯಳೇಂ ಭವದಂಘ್ರಿಗಳಾಣೆಯಿಂ ಧರಾ
ಧಾರ ಮಹಾನುಭಾವ ಶರಣಾ ಶರಣಾಗತವಜ್ರಪಂಜರಾ

---

೧ ತೆ (ಮ) ೨ ಲ್ಲ್ಯ (ಮ)

೨೧

ಜೂಜಿನೊಳೊಬ್ಬ ಜಂಗಮನು ಮಾಣಿಕಮನ್ಯರಿಗಾಗಿ ಸೋತು ತ
ನ್ನೋಜೆಗೆ ತಪ್ಪಿ ಸುಂಕ್ಕೆಂಡರುಗೊಂಡಿರೆ ಕಂಡು ಕೃಪಾಕರತ್ವದಿಂ
ಭೂಜನರೀಕ್ಷಿಸಲ್ತೊಗರಿಯಂ ಮಣಿರಾಜಿಯುಮಾಡಿಕೊಟ್ಟು ನಿ
ರ್ವ್ಯಾಜ ವಿಭೂತಿಯಾಂತೆ ಶರಣಾ ಶರಣಾಗತವಜ್ರಪಂಜರಾ

೨೨

ಭೂಸುರನಾಕಳಂ ತನುವಿಡಲ್ಕೆ ತದಂಗನೆಯಂದು ದುಃಖದಿಂ
ಸೂಸಿದಳಶ್ರುಧಾರೆಗಳ ಕಂಡು ಶಿವಾಯೆನಲೆದ್ದು ೨ಪಾಲ್ಗೊಂಡಲ್
[ರೋಸದೆ]೨ ಗೋವು ವೈದಿಕ ೩ವಿಧಾನಕಹೋ೩ ಭವದುನ್ಮಹಾತ್ಮೆ೪ಯಂ೪
೫ಈಸರ ಬಲ್ಲನಾರ್ತ೫ ಭರಣಾ ಶರಣಾಗತವಜ್ರಪಂಜರಾ

೨೩

ನಿಮ್ಮನೆಯಲ್ಲಿ ತಂಗಿ ೬ಪೊಸತಾದ೬ ವಿಚಾರವನಾಂತಳಂತದೇಂ
ಸಮ್ಮತಮೆಂದ ಬಿಜ್ಜಳನ ಸಮ್ಮುಖಮಂ ಕುರಿತೈದಿಸಕ್ಕನಾ
ಗಮ್ಮನ ಗರ್ಭದೊಳ್ಪಸುಳೆಯಿಂ ಪರಮಾರ್ಥದ ಸುದ್ದಿಯೋದಿಸು
ತ್ತಮ್ಮೆರೆದಾದಿ ಪೂಜ್ಯಶರಣಾ ಶರಣಾಗತವಜ್ರಪಂಜರಾ

೨೪

ಹರನ ಪರಪ್ರಕೃಷ್ಟ ನವಲೀಲೆಯನೀ ನೆಲದಲ್ಲಿ ತೋರ ಬಂ
ದರಸದೆ ನಿಮ್ಮ ರೀತಿಯನು ಗುಡ್ಡರೊಳಾಡುತಲೊಮ್ಮೆಯಲ್ಲಮಾ
ದರಣೆಯುಲ್ಲೈದಲಿಷ್ಟವನು ಕೊಟ್ಟು ಮಹಾತ್ಮೆಯ ಸಿದ್ಧರಾಮನೊ
ಳ್ಬೆರಿಸಿದಿ೭[ರೀವ]೭ಭಾವಕರಣಾ ಶರಣಾಗತವಜ್ರಪಂಜರಾ

೨೫

ಆಗ್ರಹದಿಂದಲಾದಲಡುಲ ವಿನೋದದಿ ಹಾಸ್ಯದಲೊಮ್ಮೆ ನಿಮ್ಮ ನಾ
ಮಗ್ರಹಣಂ ಕೃತಾರ್ಥರಸು ಮಾರ್ಳ್ಕೆಡೆಯೊಳ್ನವಬೀಜಮನ್ನಲೀ
ವಿಗ್ರಹಧಾರಿಗಳ್ಗೆ ನಿಜಮೀಕ್ಷಿಸೆ ಗೊಲ್ಲತಿಯನ್ನು ಜೈನಭೂ
ಪಗೃಹಮುಖ್ಯ ಪೂಜ್ಯಚರಣಾ ಶರಣಾಗತವಜ್ರಪಂಜರಾ

---

೧ ತ್ಯ (ಶಿ) ೨ ಪಾಲ್ಗೊಂಡತ್ತೊಸೆದು (ಶಿ) ೩ ವಿಧಾನತ್ಅ (ಶಿ) ೪ ಯೇಂ (ಶಿ)
೫ ನೀಶರಣಾರ್ಥ (ಶಿ) ೬ ಮೊಸಲಾದ (ಶಿ) ೭ ರೀವು (ಮೂಲ) ೮ ರು (ಮ)
೯ ಳ್ಪೆ (ಮ)

೨೬

ಬಿನ್ನಪವಾರ್ತರಕ್ಷಕ ತ್ರುಳಿಲ್ಬಸವಾ ಶರಣಾರ್ಥಿ ಶೀಲಸಂ
ಪನ್ನ ಪರಾಕು ಮಂತ್ರಿವರ ವಂದಸವಾದಿಗಣೇಶ ಕೀರ್ತನಂ
ಸನ್ನುತ ಪಕ್ಷರಕ್ಷಕಂನೆ ಸಾರ೧ ಕೃಪಾಕರ ಜಾಗುಮಾಡದಿ
ನ್ನೆನ್ನನು ಕಾಯ್ಪುದಾಪ್ತಭರಣಾ ಶರಣಾಗತವಜ್ರಪಂಜರಾ

೨೭

ಸಾಕ್ಷರ ಸಿದ್ಧಿಯಿಂ ಸಕಲಲೋಕ ವಶೀಕರಣಾದಿ ಸತ್ಕಳಾ
ದೀಕ್ಷಿತರೊಮ್ಮೆ ನಿಮ್ಮನುವಿನಿಂ ಶಿವಭಕ್ತಿಗೆ ಮುಖ್ಯರಾಗಿ ತಾ
ಪಕ್ಷಯ ಮುಕ್ತಿಯಂ ಪಡೆಯೆ ಶುದ್ಧ ಗುರುತ್ವಪದಾರ್ಹ೨[ರಯ್ಯ]೨ನೀ
ಲಾಕ್ಷಿಯ ದಿವ್ಯಚಿತ್ತಶರಣಾ ಶರಣಾಗತವಜ್ರಪಂಜರಾ

೨೮

ಶ್ರಿತಜನಕಲ್ಪಭೂಜ ಶಿವಚಿತ್ಸುಖಸಾಗರ೩ಪೂರ್ಣ೩ರಾಜ ಸ
ನ್ನುತ ಗಣಸತ್ಸಮಾಜ ಚರಮೂರ್ತಿಪದಾಂಚಿತಹೃತ್ಪಯೋಜ ಭಾ
ವಿತ ಪರಮುಕ್ತಿಬೀಜ ಮರೆವೊಕ್ಕರ ಕಾಯ್ವ ವೃಷಾಧಿರಾಜ ಶಾ
ಶ್ವತ ಜಗದೇಕಸದ್ವ್ರತರಣಾ ಶರಣಾಗತವಜ್ರಪಂಜರಾ

೨೯

ಮಂಜುಳ ಮುಕ್ತಿಕಾಂತೆಯ ಕಚಸ್ಥಲಶೋಭಿತ ಚಾರುಮಲ್ಲಿಕಾ
ಮಂಜರಿಯಂತೆ ಕೀರ್ತಿ ಪೊಸತಾಗೆ ವಿ೪ಹಾ೪ಪಿತಶಕ್ತಿ ನಿಮ್ಮೊಳೀಂ
ರಂಜನೆವೆತ್ತುದೆಲ್ಲರ ದರಿದ್ರನಿವಾರಣಭಾವದಲ್ಲಿ ದ್ರ
ವ್ಯಾಂಜನಮಾಗಿ ಸಾರಕರುಣಾ ಶರಣಾಗತವಜ್ರಪಂಜರಾ

೩೦

೫ಸು೫ಮತಕೆ ಶೀಲವಾವುದೊ ಶಮಾದಿಗಳೆಂದೆನಲೇನು ಮಿಕ್ಕ ಗೌ
ಪ್ಯಮಯಮದಾವುದೋ ತಿಳಿಯಲಿಲ್ಲದ ಪಾಮರರನ್ನು ಬೋಧಿಸ
ಲ್ಕಮಲ ಶಿವೈಕ್ಯರಾಗಲದರಿಂ ಗುರುರೂಪವು ನೀನೆ ದಂಡಭೃ
ತ್ತಿಮಿರವಿಭಂಜನೋದ್ಯದರುಣಾ ಶರಣಾಗತವಜ್ರಪಂಜರಾ

---

೧ ಜೈ (ಶಿ) ೨ ರೀವು (ಮೂಲ) ೩ ಪೂರ್ವ (ಶಿ) ೪ ಹಿ (ಶಿ) ೫ ಸಂ (ಶಿ)

೩೧

ತಾಮಸಕೃತ್ಯದಿಂ ಬದುಕಿ ತೋರದೆ ನಿತ್ಯ ವಿವೇಕಸಾಧನಂ
ಪಾಮರನಾಗೆ ಶೈವಪದಮಂ ಮರೆದೀ ಪತಿತಾಗ್ರಗಾಮಿಯಂ
ಭೂಮಿಯೊಳಾಂರಂಕಾಯ್ವರನು ಕಾಣದೆ ನಿಮ್ಮವನೆಂಬೆನಾರ್ತರ
ಕ್ಷಾಮಣಿ ಪಾಲಿಸಾಪ್ತಭರಣಾ ಶರಣಾಗತವಜ್ರಪಂಜರಾ

೩೨

ದುರುಳ ನರೇಶರಟ್ಟುಳಿಗೆ ದುರ್ಗಮ ಕಂಟಕ ತಾಪಕಳ್ಕಿ ಬ
ಲ್ಸೊರಗಿದ ದೀನರಂ ಪೊರೆವ ಶುದ್ಧ ದಯಾನಿಧಿಯೆಂದು ಕೇಳಿ ಬಂ
ದರಸುತ ನಿಮ್ಮ ಸಾರಿದೆನಿಕೋ ಬಸವಾ ತಡವೇತಕೆನ್ನನುಂ
ಕರುಣಿಸಿ ಕಾಯ್ವುದೀಶ ಶರಣಾ ಶರಣಾಗತವಜ್ರಪಂಜರಾ

೩೩

ಎಡಬಲದಲ್ಲಿ ಬಾಡುವೆಳಪೈರುಗಳಂ ತೊರೆದೆಲ್ಲ ನೀರ್ಗಳಂ
ಜಡನಿಧಿಗಿತ್ತ ವಾಹಿನಿಯ ಪೋಲ್ತ ಜಡಾತ್ಮರ ಪೊಂದಲೇಕೆ ನೀಂ
ಬಡವರ ಭಾಗ್ಯದಂತೆ ದೊರೆಯಲ್ಕರೆವೊಕ್ಕೆಯನಾಥನೆಂದು ಕೈ
ಪಿಡಿದೊಡನಾಡು ಭಕ್ತಭರಣಾ ಶರಣಾಗತವಜ್ರಪಂಜರಾ

೩೪

ಸಮ್ಮತ ಸಿದ್ಧಿಯಂ ಪರಮ ಸಾಧನವೃತ್ತಿಯ ಪುಣ್ಯಮಾರ್ಗಮಂ
ಗಮ್ಮನೆ ಮುಟ್ಟಿ ಸೇವಿಸಿದ ಕಾಮುಕರಿಂಗೆ ಶಿವಾನುಕೂಲದಿಂ
ನಿಮ್ಮಡಿ ಭಕ್ತಿಯಲ್ಲಿ ಮನಮುಣ್ಮಿದ ಮಾತ್ರದಿ ಪಾಧದಪದ್ಮದೊ
ಳ್ಬೊಮ್ಮವ ತೋರಿಕೊಟ್ಟ ಶರಣಾ ಶರಣಾಗತವಜ್ರಪಂಜರಾ

೩೫

ಗುಣಗಣಬಂಧಗಳ್ದುರಿತಕೋಟಿಗಳೆನ್ನೊಳು ಕಂಡು ತನ್ನಿವಾ
ರಣಮೆಸಗುತ್ತೆ ಕಾಯ್ವ ಬಲಮಿಲ್ಲದೆ ಕೈಬಿಡಲಾದರೆಲ್ಲರಂ
ದೇಣಿಕೆಗೆ ಬಂತು ನಿಮ್ಮ ಮಹಿಮಾತಿಶಯಂ ಕರುಣಾಬ್ಧಿ ದೀನರ
ಕ್ಷಣಕನುವಾಗು ಭೂತಭರಣಾ ಶರಣಾಗತವಜ್ರಪಂಜರಾ

---

೧ ದ (ಜ) ೨ ಲ್ಯಾ (ಶಿ) ೩ ಣೆ (ಶಿ)

೩೬

ತನುವಿಡಿದೇನು ಸಾರ್ಥಕ ಮನಂ ಬಿಡಲೊಲ್ಲದು ದುರ್ವಿವಾದವೊಂ
ದಿನಿತು ಮದಾಪ್ತಭಾವದೊಡನಾಟದೊಳಿಕ್ಕಿತು ಮಾಡಲೇಂ ಮದಾ
ಪ್ತನೆ ದಯವಾಗಿ ತತ್ಕುಟಿಲ ನಾಟಕದಿಂದುಳಿಸೆನ್ನ ಶೈವ ಸಾ
ದನೆಯನೆ ಕಾಯ್ವುದಾರ್ತಶರಣಾ ಶರಣಾಗತವಜ್ರಪಂಜರಾ

೩೭

ಕಾದಕಲಾಪನಾಣೆ ಕಮಲಾಹಿತಶೇಖರನಾಣೆ ಮಾರಭಿ
ತ್ಪಾದಪಯೋಜದಾಣೆ ಪರಿಪಾಲಿಸದಿ[೧]ರ್ದ[೧]ಡೆ [೨]ವೇ[೨]ಗದಿಂದಲೀ
ಕಾದುವ ಕಷ್ಟನಿಷ್ಠುರವಿವಾದಗಳುಲ್ಬಣಕಾರಲಾರೆನ
ಯ್ಯಾ ದಯಮಾಡು ದೀನಭರಣಾ ಶರಣಾಗತವಜ್ರಪಂಜರಾ

೩೮

ಸಮ್ಮತವೆಮ್ಮ ರಕ್ಷಿಪುದು ಸತ್ವರದಿಂದಿದು ನಿಮ್ಮ ಸೊಮ್ಮು ಮೇ
ಣೊಮ್ಮಿಗೆಯಾಗದಿರ್ದಡೆ [೩]ಶಿವಾ[೩] ಬರಿದೇತಕೆ ಜಾಗು ತಾಯಿ ನೀ
ಲಮ್ಮಗೆ ಪೇಳಿರಯ್ಯ ಪೊರೆವಳ್ತಡವಿಲ್ಲದಲೆನ್ನಲೇನು ಚಿ
ತ್ತಂ ಮಿಗೆ ಬಲ್ಲುದಾಪ್ತಭರಣಾ ಶರಣಾಗತವಜ್ರಪಂಜರಾ

೩೯

ನೀತಿ ವಿವೇಕ ನಿರ್ಮಲ ಗುಣಂಗಳನಾರಿಸಲಿಲ್ಲವೆನ್ನೊಳೀ
ಪಾತಕಿಯನ್ನು ಮುಟ್ಟಿ ಪೊರೆಯಲ್ತರಮೆಂತೆನಲಾಳದಳ ಕಬ್ಬುನಂ
ಪೂತ ಸುವ[೫]ರ್ಣ[೫]ವಾಯ್ತು ಪರುಷಾಸ್ಪದದಿಂ ಕನಕಕ್ಕೆ ಸೋಂಕಲಾ
ದಾತುರವಿಲ್ಲ ಸಾಧುಶರಣಾ ಶರಣಾಗತವಜ್ರಪಂಜರಾ

೪೦

ಕೋಪಿಸಲೇಕೆ ಮುನ್ನವೆ ಮದೀಪ್ಸಿತಮಂ ಕೊಡು ಮತ್ತೆ ಮಾಡು ವಿ
ಜ್ಞಾಪನವಿನ್ನು ಬಿಜ್ಜಳ ನರೇಶ್ವರ [೬]ಪತ್ತನ[೬] ಪಾಲನೋನ್ಮತ
ಸ್ಥಾಪನ ಮುಖ್ಯಕಾರ್ಯಗಳನುಂಡುಣಬಂದವರಿಂದ ಮುಂಚೆ ಕ್ಷು
ತ್ತಾಪಿಗೆ ನೀಡುವಂತೆ ಶರಣಾ ಶರಣಾಗತವಜ್ರಪಂಜರಾ

---

೧ ದೊ (ಶಿ) ೨ ಬೇ (ಶಿ) ೩ ವೃಥಾ (ಶಿ) ೪ ದ್ಯ (ಶಿ)
೫ ರ್ಣ (ಶಿ) ೬ ಪಟ್ಟಣ (ಶಿ)

೪೧

ಕಿಂಕರಪೇಂದೆ ಕಿಂಕರನ ಕಿಂಕರನೆಂದೆನು ದೂತನೆಂದೆನ್ನೈ
ಲೆಂಕರ ಲೆಂಕನೆಂದೆ ಮಗನೆಂದೆನು ದಾಸರ ದಾಸನೆಂದೆ ಕೇಳ್
ಮಂಕುಮನುಷ್ಯನಲ್ಲಿ ಗುಣವಾರಿಸಿ ನೋಡದೆ ಕಾಯ್ವು[೧]ದೇಕ[೧] ನಿ
[೨]ಶ್ಯಂಕ[೨] ಮನೋವಿನೋದ [೩]ಭ[೩]ರಣಾ ಶರಣಾಗತವಜ್ರಪಂಜರಾ

೪೨

ದೀನದಯಾ[೪]ಳುವೆ[೪]ಂದೆ ಗುರುವೆಂದೆ ಶಿವಾರ್ಪಣಕರ್ಮನೆಂದೆ ವಿ
ದ್ಯಾನಿಧಿಯೆಂದೆನಲ್ಲದೆ ಮಹೀಶವಶಾತ್ತವಿಭುತ್ವಮಾಂತ ಮಂ
ತ್ರೀನವಿಶೇಷನೆಂದೆನೆ ವೃಥಾ ಮರವೇಂ ಮುಳಿ[೫]ಸೇ[೫]ಕೆ ಪಾಲಿಸ
ಯ್ಯಾ ನತನಪ್ಪೆ ಸಾಧುಶರಣಾ ಶರಣಾಗತವಜ್ರಪಂಜರಾ

೪೩

ಓಜನು ದೊಡ್ಡ ಕೊಪ್ಪರಿಗೆಯಂ ನೆರೆಮಾಡುತ ಪಿಂತೆ ಮುನ್ನವೇ
ಸೂಜಿಯ ಮಾಡಿಕೊಟ್ಟ ತೆರಮಾ ಬಹುಳಾವನ ಕರ್ಮದಿಂ ಪ್ರಭೋ
ಮಾಜದಲೆನ್ನ ಪಾಲಿಪುದು ಮುಂಚೆ ಮಹಾತ್ಮರ ನೀತಿಯುಂಟದೇಂ
ಸೋಜಿಗಮಲ್ಲವಾರ್ತಭರಣಾ ಶರಣಾಗತವಜ್ರಪಂಜರಾ

೪೪

ಕ್ಷೇಮವು ಕೋಮಲಾಂಗ ಪರಿಣಾಮವು ಪದ್ಮದ[೬]ಳಾ[೬]ಕ್ಷ ಮೇಣ್ಜಯೋ
ದ್ಧಾಮವು ನಿರ್ಮಲಾಸ್ಯ ಕುಶಲಂ ಕಮನೀಯ ವಿಲಾಸ ಲಾಲಿಸೀ
ಭೂಮಿಯೊಳೊಮ್ಮೆ ದಿಗ್ವಿಜಯ[೭]ವ್ಯ[೭]ಸಿದಿರಾಗಿ ಮತಕ್ಕೆ ಮ[೮]ದ್ಗು[೮]ಣ
ಸ್ತೋಮಕೆ ನೇಮದಿಂ ಸುಕ[೯]ರು[೯]ಣಾ ಶರಣಾಗತವಜ್ರಪಂಜರಾ

೪೫

ಮನಸಿಗೆ ಮಂಗಳಂ ಮತಿಗೆ ನಿಸ್ತುಲಸಿದ್ಧಿಯು ಚಿತ್ತಕೂರ್ಜಿತಂ
ಘನತರಶಾಂತಿಸಾಧನವಹಂ ಕೃತಿಗಾಗಲಿ ದಿವ್ಯವಿಸ್ಮಯಾ
ರ್ಕನು ಮಿಗೆ ಸರ್ವಲೋಕ ಹೃದಯಾಬ್ಜವಿಕಾಸವನೊಪ್ಪೆ ಜೈಸಲೀ
ತನುವಿನ ಲೀಲೆಯಲ್ಲಿ ಶರಣಾ ಶರಣಾಗತವಜ್ರಪಂಜರಾ

---

೧ ದೀತ (ಶಿ) ೨ ಶ್ಚಿಂತ (ಶಿ) ೩ ಶ (ಮು) ೪ ಲನೆಂ (ಶಿ)
೫ ಸ್ಯಾಕ (ಶಿ) ೬ ಲಾ (ಶಿ) ೭ ವೈ (ಶಿ) ೮ ದ್ಗ (ಮು) ೯ ರ (ಶಿ)

೪೬

ಸಕಲರೊಳಾನು ಮೂರ್ಖನಹುದಯ್ಯ ಭವಚ್ಚರಣಾಂಬುಜಾತ ಪಾ
ದುಕೆಗಳ ಪೊತ್ತುಕೊಂಡು ಶಿವದೀಕ್ಷೆಯನಾಂತೆನು ಭಕ್ತನಾಗ [1]ಲೊಂ
ಟ್ಟು ಕಸವನಾರಿಸಲ್ಫಲವೆ ಪಾವನಮಾಳ್ಪುದು ನಿಮ್ಮ ಕೀರ್ತಿಸಾ
ರಕೆ [2]ಶರಣೆ[2]ಂಬೆನಾರ್ತಭರಣಾ ಶರಣಾಗತವಜ್ರಪಂಜರಾ

೪೭

ಐದುವುದುಂಟು ಸಂಚಿತಗಳೊಬ್ಬುಳಿಯಾಗಿ ಸಮಸ್ತರಲ್ಲಿ ಮುಂ
ದೈದ ಫಲಾನುಸಾರದಲಿ ಮಾಣದಲೀ ತನುಸಂಗದಿಂದ ಮುಂ
ತೈದು [3]ಗು[3]ಣಂಗಳಾದ ಕರಣಂಗಳ ನಿಮ್ಮಡಿ ಸೇವೆಗೊಪ್ಪಿ[4]ಸೇ[4]
ಕೈ ದಯಮಾಡು ನಿತ್ಯಕ[5]ರು[5]ಣಾ ಶರಣಾಗತವಜ್ರಪಂಜರಾ

೪೮

ಪೆತ್ತರು ತಂದೆತಾಯ್ಗಳುಪಚಾರ[6]ವ[6]ನೊಪ್ಪಿನೆಗ[7]ಳ್ದ[7]ರೆನ್ನ ಸಂ
ಪತ್ತಿಗೆಯಾಸೆವಟ್ಟು ಪಿರಿದಲ್ಲ ಮದಾಗಮಯೋಗದಾಸೆಯೇ
ನಿತ್ತೆಸುತೆನ್ನ ಪಾಲಿಸುವರೀ ಪುತ್ರ[8]ದಲ್ಲವರಿಂದ ನೀವು[8] ಸ
ರ್ವೋತ್ತಮರೆಂಬೆನಾರ್ತಭರಣಾ ಶರಣಾಗತವಜ್ರಪಂಜರಾ

೪೯

ಮುತ್ತಿನ ಬಿಜ್ಜ ಮಂ ನೆಗಳಬಲ್ಲವನಿಂ ಬೃಹದಶ್ಮರಂಧ್ರಮೊ
ಪ್ಪೊತ್ತಿಗೆ ತೂಗದಿರ್ಪುವುದದೂಣೆಯೆ ನಿಮ್ಮಯ ಕೀರ್ತನಾನ್ನಮಂ
ತುತ್ತನೊಡರ್ಚುವಂ ನಿಗಮಶಾಸ್ತ್ರ [9]ಘನೋದರ್ನ[9] ರಾಶಿಯುಂ ಬಿಡ
ಲ್ಕೆತ್ತಣ [10]ದೋ[10]ಷಂ:ಪಾಪ್ತಭರಣಾ ಶರಣಾಗತವಜ್ರಪಂಜರಾ

೫೦

ಈ ಧನಮೀ ನೆಲಂ ಸತಿಸುತಾಧಿಕಸಂಪದಮೆಲ್ಲ ಸತ್ಪದಾ
ರಾಧನ ಕರ್ಮದಲ್ಲಿ ವಿನಿಯೋಗಿಸಿಕೊಂಡೊಡೆ ಕೋಟಿಬಾಳ್ವವಾ
ಸಾಧನಮಲ್ಲದನ್ಯವಿಧಿಯಲ್ಲುಪಯೋಗಿಸೆ [11]ಕಾ[11]ಸುಬಾಳವೈ
ಶ್ರೀಧರ ಮುಖ್ಯಪೂಜ್ಯ [12]ಶ[12]ರಣಾ ಶರಣಾಗತವಜ್ರಪಂಜರಾ

---

೧ ಲ್ಕೊ (ಮ), ಲೊಪ್ಪಿ (ಶಿ) ೨ ನಮೋಎಂ (ಶಿ) ೩ ಬಾ (ಮ), ಬ (ಶಿ)
೪ ಸಾ (ಶಿ) ೫ ರ (ಶಿ) ೬ ಮ (ಶಿ) ೭ ಳ್ವ (ಶಿ) ೮ ದೆಲ್ಲವಾರಿಂದಲೀವು (ಶಿ)
೯ ಘನೋದಯ (ಜ) ೧೦ ದೋ ನೀ (ಶಿ) ೧೧ ತಾ (ಶಿ) ೧೨ ಚ (ಮ)

೫೧

ಕ್ಷಿತಿಗೆ ವಿನೋದದಿಂ ಶಿವಮತೈಕಪಯೋನಿಧಿಯನ್ನು ಪೆರ್ಚಿಸಲ್
ಸಿತಕರನಂದದಿಂ ವೃಷಭರಾಜನೆನಲ್ಕೊಗದೋರಿ ಚೈನ ದು
ರ್ಮತಗಳ ಖಂಡಿಸುತ್ತೆ ಭರದಿಂ ಮೆರೆದಾಡುವ ಮಾನ್ಯ ಮನ್ನಿಸಾ
ನತಜನಕಲ್ಮಷಾಪಹರಣಾ ಶರಣಾಗತವಜ್ರಪಂಜರಾ

೫೨

ಧರೆಯೊಳು ಪುಟ್ಟಲೇನು ನರವೇಷದಿ ನಂದನನಾದಡೇಂ ಮಹೀ
ಸುರನಿಗೆ ಲೋಗರಂತೆ ಕುಣಿದಾಡಿದಡೇಂ ಜಿನಭೂಪಮಂತ್ರಿಶೇ
ಖರನೆನಲಿದ್ದಡೇನು ಫಲಿತಾರ್ಥವು ಮದ್ಗುರು ನಂದಿಕೇಶನೆಂ
ದರುಹಿಸಿ ೧ಕೊಂ೧ಳ್ವದೇಕ೨ಶ೨ರಣಾ ಶರಣಾಗತವಜ್ರಪಂಜರಾ

೫೩

ಪಾಪ ಮುಖಾರಿವರ್ಗದ ವಿಘಾತವೊ ಪಾಟಿಸೆ ದಂಡಧಾರ ಘಂ
ಟಾಪಥದಲ್ಲಿ ನಿರ್ಬಲವಿಲಾಸವೊ ಮೇಣ್ಕಲಿಭಂಗವೋ ಭವ
ದ್ರೂಪದ ವಸ್ತುಗೋಪಿತ ಕರಂಡ೩ದೊ೩ಲೊಪ್ಪುವ ಮಾತೃಗರ್ಭವೆಂ
ಬೀ ಪುರು೪ಷೋಕ್ತ೪ನೈಜ೫ಭ೫ರಣಾ ಶರಣಾಗತವಜ್ರಪಂಜರಾ

೫೪

ಜಯಮಯ ಜನ್ಮವೀರ ಖಳಭೂಜಕುಠಾರ ಚಿದಾತ್ಮಸಾರ ಸಂ
ಶಯಮತಕರ್ಮದೂರ ಕಮನೀಯ ಕೃಪಾರಸಪುಂಜಪೂರ ನಿ
ಶ್ಚಯ ಪದಮುಖ್ಯಕಾರಣ ಮಹತ್ತರ ತಾರಕಮಂತ್ರಧಾರಣಾ
ಶ್ರಯ ವಿತತಾಧಿಕಾರ೬ಶ೬ರಣಾ ಶರಣಾಗತವಜ್ರಪಂಜರಾ

೫೫

ಮತವಿಷಯಂಗಳಲ್ಲಿ ಬಿಡದಾರುವಿಚಾರದ ರೀತಿಯಿಂ ಗಣೋ
ಚಿತಮೆನೆ ಗೌಪ್ಯಸಾರ ಚಿದಖಂಡವಿವರ್ಣದೊಳಿಷ್ಟಲಿಂಗಪ
ದ್ಧತಿಮಯಮಾಗಿ ಮಂದರಭವಂ ಪರಿದೋಡಲು ನಿತ್ಯಭಾಷ್ಯನಿ
ರ್ಮಿತ ಮಹಿತಾಗಮಾನುಸರಣಾ ಶರಣಾಗತವಜ್ರಪಂಜರಾ

---

೧ ಕೇ (ಮ ಮತ್ತು ಶಿ) ೨ ಕ (ಮ ಮತ್ತು ಶಿ) ೩ ದ (ಜ)
೪ ಹೋತ್ತ (ಶಿ) ೫ ಶ (ಶಿ) ೬ ಕ (ಶಿ)

೫೬

ಜೈಸಿ ದುರಾತ್ಮರಂ ತ್ರಿವಿಧಭಕ್ತಿಸಮಾಪಿತಶೀಲಪೂಂತು ನಿ
ಶ್ಚೈಲಸಿ ಶಿವಾಧಿಕಪ್ರಮಂತ ಮುಟ್ಟಿ೧ ಪಚಾರಿಸಿ ಜೈನಂ ಬೌದ್ಧರಿಂ
ಗೈಸಿ ಸಮಾನರೀತಿ ಪರವಾದಿಭಯಂಕರನೆಂದು ಡಂಗುರಂ
ಬೊಯ್ಸಿದ ನಿರ್ವಿಕಲ್ಪಶರಣಾ ಶರಣಾಗತವಜ್ರಪಂಜರಾ

೫೭

ಶುಷ್ಕಮಹೀಜಮಿಲ್ಲ ಸುಳಿಗುಂದುವ ಪೈರುಗಳಿಲ್ಲ ನೋಡ ನಿ
ರ್ನಿಷ್ಕ ಗೃಹಸ್ಥರಿಲ್ಲ ಬರಡಾಕಳು ಬಂಜೆಯರಿಲ್ಲ ಸಂಪದಂ
ಪುಷ್ಕಳಮಾಂತುದೆನ್ನಲು ಪುರಂ ೨ಪ್ರ೨ರವಾದಿಯು ನಿಮ್ಮ ಧರ್ಮದಿಂ
ನಿಷ್ಕಪಟೈಕಶೀಲಶರಣಾ ಶರಣಾಗತವಜ್ರಪಂಜರಾ

೫೮

ಚಿ೩ದ್ಧ೩ನಸಶೂನ್ಯರಾಗಿ ಘನಚೇತನಲಕ್ಷಣದಲ್ಲಿ ೪ಮಾ೪ನಮಂ
ಸಿದ್ಧಿಸಿಕೊಳ್ಳಲೊಲ್ಲದ ವಿರುದ್ಧ ನಿರೀಶ್ವರವಾದಿವಾಸನಾ
ಬದ್ಧರು ನಿಮ್ಮ ಚೆನ್ನಡಿಗಳೀಕ್ಷಿಸಲಾವುದೊ ಸಂಚಿತಂ ಜಗ
ಜ್ಜುದ್ಧರ ಮಾಡಿ ಕಾ೫ಯ್ದು೫ ಶರಣಾ ಶರಣಾಗತವಜ್ರಪಂಜರಾ

೫೯

ಕುಮತವಿಭಂಗ ಬಾ ಕಲಿಮದೋತ್ಪಲಜಾಲಪತಂಗ ಬಾ ನಿರ
ಸ್ತಮಲ ಸುಸಂಗ ಬಾ ನಿಜಮಹೋದಯ ಚಿದ್ಘನಲಿಂಗ ಬಾ ಪರಾ
ಕ್ರಮಿತ ಚಿದಂಗ ಬಾ ವಿಷಯವರ್ಗಸಮೀರಭುಜಂಗ ಬಾ ಜಗ
ನ್ನಮಿತರ ಪಾಲಿಸಕ್ಕೆ ೬ಪ೬ರಣಾ ಶರಣಾಗತವಜ್ರಪಂಜರಾ

೬೦

ನಮದನುಕೂಲ ಬಾ ವಿತತವಾದ ಚರಾಚರ ಮೂಲ ಬಾ ಮಹ
ತ್ಕ್ರಮಮಯಶೀಲ ಬಾ ಮಹಿತಮಂಗಳಕಾರ್ಯವಿಶಾಲ ಬಾ ಗಣೋ
ತ್ತಮ ಘನಲೀಲ ಬಾ ಸಕಲಸೇವಕಭಾವಿಕಪಾಲ ಬಾರಯಾ
ನಮಿಸುವೆನೆನ್ನ ಕಾಯ್ವ ೭ಪ೭ರಣಾ ಶರಣಾಗತವಜ್ರಪಂಜರಾ

---

೧ ಥ ಮುಟ್ಟುವ (ಶಿ)    ೨ ಪ (ಮ. ಗೌ. ಪ್ರ.)    ೩ ದ್ಧ (ಶಿ)    ೪ ಮ (ಶಿ)
೫ ಯ್ದ (ಶಿ)    ೬ ಶ (ಘು)    ೭ ಶ (ಘು)

೬೧

ಮಹದವತಾರ ಬಾ ವಿಶದಕಾಂತಿಮಯಾತ್ತಶರೀರ ಬಾ ಭವಾ
ಪಹ ಗುರುಸಾರ ಬಾ ನಿರುಪಮೋರ್ಜಿತಸಜ್ಜನವೀರ ಬಾ ದುರಾ
ಗ್ರಹಕುಲದೂರ ಬಾ ಯುಗಪರಾದಿ ಶಿಲಾದಕುಮಾರ ಬಾರಯಾ
ಮಹಿಮೆಯ ತೋರಲಾಪ್ತಭರಣಾ ಶ೧ರ೧ಣಾಗತವಜ್ರಪಂಜರಾ

೬೨

ಬತ್ತಿಸಬಂದೆ ದುರ್ಭವಪಯೋನಿಧಿಯಂ ಬರಿಗಾ೨ಲಿಂ೨ದೈದಿ ದಾ
ಟುತ್ತಿಹರೆನ್ನಲೆಲ್ಲ ಶಿವಭಕ್ತರು ಮುಕ್ತರು ನಿನ್ನ ಪುಣ್ಯದಿಂ
ಗೊತ್ತಿಗೆ ಸೇರಲಿನ್ನು ಬರಿದೇತಕೆ ಚಿಂತೆಯನಾದಿ ವೀರಶೈ
ವೋತ್ತಮನಾಗಿ ಸಾರ ಕ೩ರು೩ಣಾ ಶರಣಾಗತವಜ್ರಪಂಜರಾ

೬೩

ಅರ್ಚಿಸಬಂದೆ ಸರ್ವ ಚರಮೂರ್ತಿಗಳಂ ಪರಿಣಾಮವಾರ್ತೆಯಂ
ಪೇರ್ಚಿಸಬಂದೆ ನೀಂ ಗುರುಗುಹೇಶ್ವರಲಿಂಗ ಚಿದಂಗ ಸಂಗನಂ
ಮರ್ಚಿಸಬಂದೆ ಮೇದಿನಿಯೊಳೆಲ್ಲರು ಸೈಯೆನ೪ಲೊ೪ಯ್ಯನೊಪ್ಪುತಂ
ಭರ್ಚಿತಕಾಮಸೋಮಶರಣಾ ಶರಣಾಗತವಜ್ರಪಂಜರಾ

೬೪

ಕುಲವರಸುತ್ತಲಿಪ್ಪರು ಕೆಲರ್ ಧನ೪ಮು೪ಳ್ಳನ್ಯರು ವಿದ್ಯೆಯಂ ಪೆರರ್
ನೆಲಸಿರಿಗಾಗಿಯೊರ್ವರುಪದೇಶವಿಧಾನದಿ ಭೂಮಿಭಾರಕರ್
ತೊಲ೫ಗ೫ವರಂ ವಿಭಾವವರಸುತ್ತೆ ಕೃತಾರ್ಥರ ಮಾಳ್ಪೆ ಮಂತ್ರದಿಂ
ಜಲಜಭವಾಂಡಪೂಜ್ಯಚರಣಾ ಶರಣಾಗತವಜ್ರಪಂಜರಾ

೬೫

ಬಾಡುವ ನೆಲ್ಲು೬ಸಾಲು೬ ಕಿರುಗೆಜ್ಜೆಗಳುಚ್ಚಿದ ಲುಲ್ಲು ಮೆದ್ದಡ
ಲ್ಲಾಡುವ ಪಲ್ಲು ಸಂಗರದೊಳಂಜಿದ ಬಂಟನ ಬಿಲ್ಲು ಸಂದುಗೊಂ
ಡೋಡುವ ದಲ್ಲು ನಿಮ್ಮನುತಿ ೭[ಯಿಂ]೭ ಮಿತಮಾ೮[ಗುವ]೮ಸೊಲ್ಲು ನಿಷ್ಫಲಂ
ನಾಡೊಳಗೆಲ್ಲು ಸಾಧುಶರಣಾ ಶರಣಾಗತವಜ್ರಪಂಜರಾ

---

೧ ಲ (ಶಿ) ೨ ರ (ಮ) ೩ ರೊ (ಶಿ) ೪ ವ (ಶಿ) ೫ ಗು (ಜ) ೬ x (ಶಿ)
೭ ಯಿಂ (ಮೂಲ) ೮ ಗದ (ಮೂಲ)

೬೬

ನಾರುವ ಭಾವಿ ನೀರು ಸಡಂ[೧]ಲಚ್ಚಿಸಂ ಗಾಲಿಯ ಗಡ್ಡೆ ದೇರು ಬ
ಲ್ಪೇರದ ತಿಟ್ಟೆಯೂರು ನರನಾಯಕನೊಪ್ಪದ ಸುಳ್ಳುದೂರು ಮೇ
ಲ್ದಾರಿಗೆ ಸೋ[೨]ರು[೨]ವೇರು ಬಸವಾಯೆನದಿದ್ದವನಾರು ತತ್ಸಮಂ
ಬೇರೆನಲೇಕೆ ಚಾರುಚರಣಾ ಶರಣಾಗತವಜ್ರಪಂಜರಾ

೬೭

ಬೇಯದ ಕೂಳು ಬಿತ್ತಲುಪಯೋಗಕೆ ಬಾರದ ಬೀಳು ಕದ್ದು ಬಾ
[೩]ಳ್ವಾ[೩]ಯತದಾಳು ನೀ[೪]ನು[೪] [೫][ಪರನೆನ್ನುತಲೆತ್ತುದ][೫] ತೋಳು ಪೈರಿಯಿಂ
ಕಾಯದ ಕಾಳು ನಿನ್ನ ನುತಿಗೈಯದ ಭಂಡನ ಬಾಳು ಸಾಟಿ ಮ
ನ್ನಾಯಕ ಕೇಳು ಪೂಜ್ಯ[೬]ಚ[೬]ರಣಾ ಶರಣಾಗತವಜ್ರಪಂಜರಾ

೬೮

ಉಳ್ಳಿಯ ಮುದ್ದಡೇಗು ಮಳೆಗಾಲವು ಮೀರಿದ ಸಾಗು ಸಂತೆಯೊಳ್
ತಳ್ಳಿಯ ಕಳ್ಳತೂಗು ನರುಗಂಪಿಡಿದೊಪ್ಪದ ಮೂಗು ಬತ್ತಮಂ
ಸುಳ್ಳಿಗೆ ಕೊಟ್ಟ ಲಾಗು ನೆರೆ ನಿಮ್ಮನು ಪಾಡದ ಕೂಗು ಸಾಟಿಯಾ
ಗುಳ್ಳವು ಧೀಗುಣಾಢ್ಯಶರಣಾ ಶರಣಾಗತವಜ್ರಪಂಜರಾ

೬೯

ಬಾಣನ ಭಕ್ತಿಯುಂ ಮನೆಯ ಬಾಗಿಲು ಬಲ್ಲುದು ಪಾರ್ಥಭಕ್ತಿಯುಂ
ಬಾಣವು ಬಲ್ಲುದೊಂದಡಿಯು ಬಲ್ಲುದು ಕ[೭]ಣ್ಣ[೭]ಪನೊ[೮]ಪ್ಪು[೮]ಭಕ್ತಿಯುಂ
ಮಾಣದೆ ನಿಮ್ಮ ಭಕ್ತಿಯನು ಚಿತ್ತ[೯]ವು[೯] ಬಲ್ಲುದು ಚಿನ್ಮಯಾತ್ಮ ಕ
ಲ್ಯಾಣಪುರಪ್ರಸಿದ್ಧಶರಣಾ ಶರಣಾಗತವಜ್ರಪಂಜರಾ

೭೦

ಕಣ್ಣೆಪಯಿಕ್ಕುವಾ ಸಮಯ ಮಾತ್ರವು ನಿಶ್ಚಲಭಾವದಿಂ ಭವ
ತ್ಪುಣ್ಯ ಕಥಾಮೃತಕ್ಕೆ ಕಿವಿಗೊಟ್ಟ ಮನುಷ್ಯನ ಪಾಪರಾಶಿ ನಿ
ರ್ವಿಣ್ಣ್ಯತೆಯೊಂದಿ ಚಕ್ಕನುಮರಲ್ಮೊಗವಾದುದು ದೀನಬಂಧು ಬ
ಲ್ಪಣ್ಣೆಲೆಯಂತೆ ಸತ್ವಭರಣಾ ಶರಣಾಗತವಜ್ರಪಂಜರಾ

---

೧ ಲುಚ್ಚಿದ (ಶಿ ಮತ್ತು ಮ)  ೨ ಲು (ಮ)  ೩ ಳ್ವಾ (ಶಿ)  ೪ ನೆ (ಶಿ)
೫ ಪರನೆನ್ನದಲೆತ್ತುದ (ಮೂಲ)  ೬ ಶ (ಮ)  ೭ ನ್ನ (ಶಿ)  ೮ ಪ್ಪ (ಶಿ)
೯ ಪೆ (ಶಿ)

೭೧

ಸವೆಯದ ಚಿತ್ರ್ರಕಾಶ ಸಟೆಯೊಂದದ ಶಾಸ್ತ್ರವಿಶೇಷಕೋಶ ಸ
೧ದ್ಧ೧ವನಿಜಹೃನ್ನಿವೇಶ ಪುರುಷಾರ್ಥವಿಧಾಯಕ ಬುದ್ಧಿ ಪೇಳಲಾ
ನವಶಿವಸತ್ಕವೀಶ ವಿನಮಜ್ಜನದುಷ್ಕೃತಪಾಶನಾಶನಾ
ಜವದಲಿ ಪಾಲಿಸೆನ್ನ ಶರಣಾ ಶರಣಾಗತವಜ್ರಪಂಜರಾ

೭೨

ನಿರುಪಮ ನಿರ್ವಿಕಲ್ಪ ನಿಗಮಾಗಮ ಸೇವಿತ ನಿತ್ಯ ನಿಸ್ಪೃಹಾ
ಕ್ಷರ ನಿಜಮುಕ್ತಭಕ್ತ ನಿರುಪಾಧಿಕ ನಿರ್ಮಲ ನಿಸ್ಸಹಾಯ ನಿ
ರ್ಜರಜಯಶೀಲ ಜನ್ಮಮರಣಾಧಿಕವರ್ಜಿತ ಜಂಗಮಾರ್ಚನಾ
ದ್ಯುರುತರ೨ನೇಮ ಪೂಜ್ಯಶರಣಾ ಶರಣಾಗತವಜ್ರಪಂಜರಾ

೭೩

ಲೋಹವು ಕೇಳಿದರ್ಗೆ ರಜತಂ ರಜತಕ್ಕೆ ಸುವರ್ಣಮಿನ್ನದಂ
ನೇಹದಿ ಕೇಳಿದರ್ಗೆ ನವರತ್ನಗಳಿತ್ತು ಚರಪ್ರಸಾದ ದಾ
ಸೋಹಮೆನುತ್ತೆ ಭಕ್ತಿಭರದಿಂ ನೆರೆಬಾಳ್ವ ವಿಶೇಷಶೇಮುಷೀ
ಗೇಹ ನಿರಸ್ತಮೋಹಶರಣಾ ಶರಣಾಗತವಜ್ರಪಂಜರಾ

೭೪

ಭುವನಗಳಬ್ಧಿಗಳ್ಗಿರಿಗಳರ್ಕಶಶಾಂಕಮುಖಪ್ರದೇವತಾ
ನಿವಹಮಯಾಂಗನಾವನು ವಿರಾಟಪರಾ೩ತ್ಪ೩ರನಾಗಲಾ ಸದಾ
ಶಿವನನನ್ಯಭಕ್ತಿಯಲಿ ಸೋಲದೆ ಪೊತ್ತ ಸಮಸ್ತಭಾರ ಭೃ
ನ್ನವಘನಸಾರವಾಂತಕರಣಾ ಶರಣಾಗತವಜ್ರಪಂಜರಾ

೭೫

ಮರುಳರು ಮಂಕರೆಂದೆಣಿಸಲೊಲ್ಲದೆ ಬಂದ ಚರರ್ಕಳೆಲ್ಲನಂ
ಸರಿಯೆನುತಾವನೀ ಭವವಿಭಾವನದಿಂ ಪರಿಪೂಜಿಸುತ್ತ ಕೇ
ಳರಸಿದ ವಸ್ತುವರ್ಗೆ ವಿವಿಧಂಗಳನಿಂಗಿತಮಂ೪ದು ಸಲ್ಲಿಪ
ಲ್ಲರುಮರೆಯಿಲ್ಲದಾಳದೆಳ ಶರಣಾ ಶರಣಾಗತವಜ್ರಪಂಜರಾ

---

೧ ದ್ಧ (ಶಿ) ೨ ಸೀ (ಶಿ) ೩ ತ್ಮ (ಜ) ೪ ದ (ಮ)

೭೬

ಪಗಲಿರುಳೆಚ್ಚ ಮೆಚ್ಚಿಗೆಯ ಪೆಟ್ಟು ಗುಪೇಶ್ವರಲಿಂಗದಲ್ಲಿ ಬೆ
ಚ್ಚ ಗಲದೆ ರಾಜಮಾರ್ಗಗಳ ಸಾಧಿಸುತಂ ಸಚಿವತ್ವಮಾಂತು ಮೇಣ್
ಜಗದ ಚರಪ್ರದಾಂಸ್ಯಂವಿಧಿಗೆಲ್ಲಿ ನಲಲ್ಲಿರುವಿಲೆಂಬಿತು ನಿಮ್ಮ ಸ
ರ್ವಗತ ಮಹಾತ್ಮ್ಯೆಯಾತ್ಮಕರಣಾ ಶರಣಾಗತವಜ್ರಪಂಜರಾ

೭೭

ಮೋಹಮಾಯ ಪ್ರಪಂಚದಲ್ಲಿ ಮುಂಡಿಸಿ ನೈಜವಿವಾದವಾತ್ಮಮೀ
ದೇಹಮೆನುತ್ತ ಸಾಧಿಸಿ ಕೃತಾಂತ ಮಹತ್ತರದುರ್ನಿವಾರ ದಂ
ಡಾಹತಿಗೊಪ್ಪಿಕೊಂಬ ಖಳರುಲ್ಬಣಮೊಳ್ಳಿನಿತಾಗಲೀಯದೀ
ಸಾಹಸಮಲ್ಲನೆಂಬ ಶರಣಾ ಶರಣಾಗತವಜ್ರಪಂಜರಾ

೭೮

ಗುಣಮಯಮೀಪ್ರಪಂಚಮೆನಲೇಕೆ ಗುಣಂ ಪರಮಲ್ಲಮೆಂಬುವಾ
ಕ್ಷಣಿಕ ಮುಖ್ಯಾದಿವಾದಿಗಳ ಗಂಟಲಗಾಣದ ರೀತಿ ನಿಮ್ಮ ಲ
ಕ್ಷಣಗಳ ಕಂಡು ಪಾವನಪದಾಂಚಿತ ನಿರ್ಮಲ ಪಾಳಿಶುಳಮಂ ಶಿರೋ
ಮಣಿಯೆನಲಾಂತೆನಯ್ಯ ಶರಣಾ ಶರಣಾಗತವಜ್ರಪಂಜರಾ

೭೯

ಅಲ್ಲ ಮನುಷ್ಯಧರ್ಮಮೆನಲೇನು ಶಿವಂ ಭವದೀಯ ಭಕ್ತಿಯಿಂ
ದಲ್ಲಮ ವೇಷಮಂ ಪಿಡಿಯಬೇಕೆನಲಾದುದು ಲೋಕದಲ್ಲಿ ನೀಂ
ಬಲ್ಲಿದನಯ್ಯ ಸರ್ವರೊಳು ವಸ್ತುವಶೀಕರಣೈಕಸಿದ್ಧಿಯಿಂ
ಬಲ್ಲಿದನೆಂತು ಭಾಜಪ್ರಜ ಶರಣಾ ಶರಣಾಗತವಜ್ರಪಂಜರಾ

೮೦

ತನುಮನಮಿಷ್ಟಲಿಂಗಮಯಮಾ ಘನಲಿಂಗಮಯಂ ಗುರುಕ್ರಮಾ
ರ್ಚನಮೆನೆ ತನ್ಮಯಂ ಚರಸಪರ್ಯದೊಳುಂ ತ್ರಿವಿಧಾರ್ಪಣೈಕಭಾ
ವನವಿಡಿದಂತೆ ಭಾವಿಸಿ ಪರಾತ್ಪರಲೀಲೆಯ ಲೋಕದಲ್ಲಿ ಸ
ಜ್ಜನರಿಗೆ ತೋರಬಂದೆ ಶರಣಾ ಶರಣಾಗತವಜ್ರಪಂಜರಾ

---

೧ ನ್ಯ (ಶಿ) ೨ ವೆ (ಶಿ) ೩ ರಿ (ಮ) ೪ ಸು (ಶಿ) ೫ ವ (ಶಿ)

೮೧

ಬಂಧವಿಮೋಚನಕ್ಕೆ ಸಕಲೇಶ ವಿತರ್ಕ ವಿನೋದ ಸಿದ್ಧಿ ವಿ
ದ್ಬಂಧುರ ಭಾವಕಿನ್ನು ವಚನೋನ್ನಯ ವೃತ್ತಿಗೆ ಸಾಧನಂಗಳೊ
ಳ್ಸಿಂಧುಜಮೌಳಿ ನೋಡಿ ಬಸವಾಕ್ಷರಮುತ್ತಮಮೆಂದೆನಲ್ಕ ಗ
ದ್ಬಂಧು ಸಮರ್ಥ ನೀನೆ ಶರಣಾ ಶರಣಾಗತವಜ್ರಪಂಜರಾ

೮೨

ಶಿವನೊಡನಾಟವೀಸರನೊಳೂಟವು ಶಂಕರನಲ್ಲಿ ಕೂಟವಿ
ನ್ನವಿರಳನಲ್ಲಿ ನೋಟವಘನಾಶನನೊಳ್ಪೊಸಬೇಟಮಾಗಿ ನಿ
ಚ್ಚವು ಪಡಿಂಗೀ[ತ]೧ದಾಟದೊಳು ಪಟ್ಟಿನ ಶೀಲವು ಮಾಟಮೆಂಬೊಲೀ
ಭುವಿಗೆ ವಿಶೇಶವಮಾ೨ದೆ೩ ಶರಣಾ ಶರಣಾಗತವಜ್ರಪಂಜರಾ

೮೩

ನಟನಚರಿತ್ರಮಂ ಶಿವನೊಡಂಬಡಲಂದು ಮೃದಂಗವಾ೪[ದ]೩ಕಂ
ಪಟುತರವೇತ್ರಧಾರಿ ನಿಜಪೀಠದೊಳೊಪ್ಪಲು ಗೋಪನಾದೆ ಪ
ರ್ಯಟನ ವಿನೋದದೊಳಳ್ಬಸವಳನಾದೆ ಗುಹೇಶ್ವರನಾಗಲಾತನು
ತ್ಕಟಮಹಿಮೋನ್ನತಕ್ಕೆ ಶರಣಾ ಶರಣಾಗತವಜ್ರಪಂಜರಾ

೮೪

ಹೊಟ್ಟೆಯ ಕೂಳಿಗಾಗಿ ನರಪಾಲರ ಸೇವೆಯನೊಪ್ಪಿ ಸತ್ಪಥಂ
ಬಿಟ್ಟು ಮನೋನುಸಾರಿಪೆಜಡೆಯಾಡುವ ನೀಚರ ಕಂಡು ನೀನೆ ಕೈ
ಗೊಟ್ಟುರೆ ಕಾಯದಿರ್ದೊಡೆ ಪೆರರ್ದಯಗೈಯರು ನಿಮ್ಮ ಭಕ್ತನೆಂ
ದಿಟ್ಟು ಪೆಸರ್ಘವಾಬ್ಧಿ ತರಣಾ ಶರಣಾಗತವಜ್ರಪಂಜರಾ

೮೫

ಕಿರುಕುಳಮಲ್ಲ ನಿಮ್ಮ ಪದಭಕ್ತಿಯು ಲೋಕ೬ದಿ೬ ಪೂರ್ವಪುಣ್ಯದಿಂ
ದೊರೆವುದು ಮಿಕ್ಕ ನಾಟಕ ಪುರಾಣ ವಿಧಿ ಶ್ರುತಿ ನೀತಿ ಕರ್ಮ ಭಾ
ವ ರಸ ವಿಚಾರಗರ್ವಿತ ಕವೀಶ್ವರಪಂಡಿತರಿರ್ದಡೇನು ದು
ಸ್ತರವದು ದುಷ್ಕೃತಾಪಹರಣಾ ಶರಣಾಗತವಜ್ರಪಂಜರಾ

---

೧ ಗೀಟ (ಜ ಮತ್ತು ಮ), ಗಿಷ್ಟ (ಶಿ) ೨ ದ (ಶಿ) ೩ ಹ (ಮೂಲ)
೪ ಪಸರ (ಜ) ೫ ಮೆ (ಶಿ) ೬ ದ (ಶಿ)

೮೬

ಧರೆಯೊಳು ಸಾಧಕರ್ಕೆಲವರುಂಟು೧[ನತಾತ್ಮ]೧ತಮೋಪಹಾರದ
ಲ್ಲರೆಮರೆವುಳ್ಳವರ್ಮಿಸುಪ ದೀಪಗಳಂತೆ ಮಹಾನುಭಾವ ನೀ
ನರಸುವಡೊರ್ವನೇ ಗುರುಶಿಖಾಮಣಿ೨ಮೆಳ್ಗಿ೨ಳೆ ಭಾಪು ಭಾಪು ಭಾ
ಸ್ಕರನೆನಲೊಪ್ಪಿದಯ್ಯ ಶರಣಾ ಶರಣಾಗತವಜ್ರಪಂಜರಾ

೮೭

ಕೇವಲ ಚಿನ್ಮಯಾಕರ ಪರಾತ್ಪರನೇ ಪರಬೊಮ್ಮನಾದ೩[ತಾ]೩
ದೇವರದೇವನೇಕಗುರುಲಿಂಗಚರತ್ವವ ತಾಳಿ ನಿಮ್ಮ ಸಂ
ಭಾವನ ಭಕ್ತಿಪಾಶದಲಿ೪ಸಿಕ್ಕು೪ವಿಭೂತಿ ವಿಚಾರದಿಂ ಜಗ
ಜ್ಜೀವನ ನೀನು ದೀನಭರಣಾ ಶರಣಾಗತವಜ್ರಪಂಜರಾ

೮೮

ಪಾರಗರಾರು ನಿನ್ನ ಚರಿತಾಂಬುಧಿಯುನ್ನತಮಾಗೆ ಬಣ್ಣಿಸ
ಲ್ಬಾರದು ಶೇಷಗೊಮ್ಮಯದರಿಂ೫ದಿದಿ೫ರಾಂತುಳಿಯಲ್ಕೆ ತಕ್ಕುದೇಂ
ತೋರಿದ ಮಾತ್ರಮೇ ನುತಿಸುತಂ ಸುಖಿಯಾದೆನು ಸಾರ ಷಟ್‌ಸ್ಥಲಾ
ಧಾರ ವಿಚಾರಮೂರ್ತಿ ಶರಣಾ ಶರಣಾಗತವಜ್ರಪಂಜರಾ

೮೯

ಮಿಸುನಿಯ ಮುದ್ದೆ ಪಟ್ಟಿಗೆಯೊಳೊಪ್ಪುತಿರಲ್ಕ ಸುಗಂಪನಲ್ಲಿ೬ನೇ೬
ರಿಸಿದೊಲು ಲಿಂಗಮೂರ್ತಿಯನು ಸದ್ಗುರುರಾಜನು ಮಾದಲಾಂಬೆಯಾ
ಬಸುರೊಳಗೀ೭ರ್ದ೭ ನಿಮ್ಮಣುವಿನಾಕೃತಿಗೊಪ್ಪಿಸಿಕೊಟ್ಟನಾಗಲೆ
ಣ್ದೆಸೆಗಳೊಳೇಕಕೀರ್ತಿ ಶರಣಾ ಶರಣಾಗತವಜ್ರಪಂಜರಾ

೯೦

ಬೆಸು೮ಕಿ೮ಯು ಬೆಳ್ಳಿಯುಂ ಕರಗಲೂದಿದಡಾ ಕಸುರೆಲ್ಲ ಸೀಸಮೋ
೯ಕೋ೯ಸರುವುದೋ೧೦ಜು೧೦ಂದ ಗುಣಿಜೀವನದುಷ್ಕೃತಭಾವವನ್ನು ಮಾ
ಣಿಸುವುದು ಮುಖ್ಯ ಸಾಧನವು ಸೈಭವಿದೀಯ ಸಹಾಯದಿಂ ಗುರು
ಪ್ರಸರವಿಶೇಷದೀನಭರಣಾ ಶರಣಾಗತವಜ್ರಪಂಜರಾ

---

೧ ನತಾಂಹ (ಜ), ನತಾಹ್ವ (ಮ), ನಲಾಂಹ್ವ (ಶಿ) ೨ ಮೋಲ್ಗ (ಶಿ)
೩ ಡಾ (ಮೂಲ) ೪ ಸಿಕ್ಕಲು (ಶಿ) ೫ ದ್ಯಡ (ಶಿ) ೬ ಸೇ (ಶಿ)
೭ ದರ್ಗ (ಶಿ) ೮ ಕೆ (ಶಿ) ೯ ಕು (ಶಿ) ೧೦ ಜಿ (ಮ)

೯೧

ಕರಣಗಳೈದು ಭೂತಗಳ ಯೋಜನದಿಂ ಮರುದಿಂದ್ರಿಯಾದಿ ಸಂ
ಕರದಲಿ ೧ಷಟ್ಪ್ರಕಾರಂವಿಷಯಂಗಳ ಭೋಗವು ಲಿಂಗಭೋಗವೆಂ
ದರಸುತ ೨ಲಿಂಗದೇಹಮಯು೨ವಾಸನೆಯಿಂ ಕಡೆಗಿರ್ದು ಚಿತ್ಕಲಾ
ಕರವನು ಸಾರಬಲ್ಲಶರಣಾ ಶರಣಾಗತವಜ್ರಪಂಜರಾ

೯೨

ಬರಿಯ ವಿವಾದವನ್ನು ಬಗುಳಾಡುವ೩ಲಂಡಲಿಗಾಡಿ೩ಗರ್ದುರಾ
ಚರಣೆಳೊಳಿರ್ದು ಸುಳ್ಳು ಬಡಿವಾರಗಳಿಂ ಕಡುಸೊಕ್ಕಲೇನುಯೀ
ನೊರಜುಗಳೆಲ್ಲ ನಿಮ್ಮ ಚರಣಾಸತಶೀಲರ ಪಾದರಕ್ಷೆಯಿಂ
ಸರಿಯೆನಲೊಲ್ಲೆನಯ್ಯ ಶರಣಾ ಶರಣಾಗತವಜ್ರಪಂಜರಾ

೯೩

ಮತ್ತಗಜಂಗಳ[೪ಿಂ]೪ಕೊರೆಯೆ ಸೋಲದು ಸಿಂಗನು ಭಾನುವೆಂದು ಕ
ಗ್ಗತ್ತಲೆ ನೂಕಿ ಪೊಯ್ಯಲಣುಗುತ್ತಿಹನಾ ತೆರಮಾರ್ತ ಕಷ್ಟವ
ತ್ಯುತ್ತರವಾಗಲಾಗಲದನಂ ಬಡಿವಲ್ಲಿ ಮಹಾತ್ಮ ನೀನಿರಲ್
೫ಮತ್ತದಕಂಜೆ೫ನಯ್ಯ ಶರಣಾ ಶರಣಾಗತವಜ್ರಪಂಜರಾ

೯೪

ಕುಣಿವರು ಕೂಗುವರ್ಮಣಿವರುರ್ಬುವರುಕ್ಕುವರೊಪ್ಪುವರ್ಘವ
ದ್ಗುಣಮಹಿಮಾಧಿಕತ್ವದ ವಿಚಾರವನೀ ಜಗದಲ್ಲಿ ಕೇಳಿದಾ
ಕ್ಷಣದೊಳು ಸಾತ್ವಿಕರ್ಪಳಿವ ದುರ್ಜನರಿನ್ನುಳಿದಿಪ್ಪರೆಂದಡಾ
೬ಗ೬ಣಗಿರಿವಜ್ರನೆಂಬ ಶರಣಾ ಶರಣಾಗತವಜ್ರಪಂಜರಾ

೯೫

ಈ ವಸುಧಾಪ್ರಪಂಚದೊಳಗಿಂದುಧರಾರ್ಚಕರಿಲ್ಲದಿಲ್ಲ ಸಂ
ಜೀವಕವಿಪ್ರಭಾವದಲಿ ಶೋಧಿಸಿ ನೋಡಲು ದುಷ್ಟಕಷ್ಟ ವಿ
ದ್ರಾವಣ ನಿನ್ನ ಕಂಡೆನಘವಾರನಿವಾರಣನಿಂದುವೆಂದೆನಲ್
ಪಾವನಮಾಳ್ಪುದೆನ್ನ ಶರಣಾ ಶರಣಾಗತವಜ್ರಪಂಜರಾ

---

೧ ಷಟ್ಪ್ರಕಾರದ (ಶಿ) ೨ ಲಿಂಗಮಯದೇಹ (ಶಿ) ೩ ಲೆಂಡಲಿಗಾಗಿ (ಶಿ)
೪ ಳಂ (ಮೂಲ) ೫ ಮತ್ತಿದಕಂಜ (ಶಿ) ೬ ಕ್ಷೆ (ಶಿ)

೯೬

ಮಂಗಳಮೂರ್ತಿ ನಿನ್ನ[೧]ಪ[೧]ದಸೇವೆಯೊಳಚ್ಯುತಭಕ್ತಿಯಿಂದ ನ
ಲ್ಲಿಂಗಿ ಕುಲಾಢ್ಯ ಸಂಗವಿಭು ವರ್ಣಿತವೀ ಶತಕಪ್ರಬಂಧ[೨]ವೊಂ[೨]
ದಿಂಗಿತಮಾ[೩]ಗಿ[೩] ತತ್ಕೃತಸಮರ್ಪಣಭಾವವನೊಪ್ಪಿ ಸತ್ಕೃಪಾ
ಪಾಂಗ[೪]ದಲೀ[೪]ಕ್ಷಿಸಯ್ಯ ಶರಣಾ ಶರಣಾಗತವಜ್ರಪಂಜರಾ

೯೭

ಕಲ್ಪಪರತ್ವದಿಂ ಭವದಮೋಘಚರಿತ್ರವಿದಾಗಮೋಕ್ತಿ[೫]ಯೊ
ಳ್ಪಲ್ಪಿಡಿದಿಪ್ಪುದಲ್ಪಮತಿಯಾಂ ಶತಪದ್ಯಗಳಿಂದ ಯೋಗ್ಯಮಾ
ಗಲ್ಪಿರಿದೆಂದು ಸನ್ನುತಿಪೆನಯ್ಯ ಕೃತಾರ್ಥನಮಾಡು ವಾಯುಭು
ಕ್ತ್ಯಲ್ಪನಿಜವೇಸಿಜತಾತ್ಮ[೬]ಶರ[೬]ಣಾ ಶರಣಾಗತವಜ್ರಪಂಜರಾ

೯೮

ಇದು ಬರೆದೋದಿ ಕೇಳಿದ ಮನುಷ್ಯರಿಗೂರ್ಜಿತ ಭಕ್ತಿಮುಕ್ತಿ ಸಂ
ಪದಗಳನಿತ್ತು ಪಾಲಿಸು ವಿನೋದದಲೀ ಜಗದಲ್ಲಿ ನಿಮ್ಮ ಕೀ
ರ್ತಿದಯಗಳೇಕಮಾಗಲಿ ಜಯೋ[೭]ತ್ಸವ[೭]ದಿಂ ಪ್ರಭುಲೀಲೆ[೮]ಯಿಂ[೮]ತಿದ
ಭ್ಯುದಯ ಸಮಸ್ತಕರ್ಮ[೯]ಕ[೯]ರುಣಾ ಶರಣಾಗತವಜ್ರಪಂಜರಾ

೯೯

ಅವ್ಯಯನಪ್ರಮೇಯನಕಳಂಕನನಾಮಯನಾದ್ಯನಲ್ಲಮಂ
ಜಿಂದ್ವ[೧೦]ಂಸರಾಜಿರಾಜಿತ ವಸಂತನು ಭಾವಿಸಲಾಗಿ ನಿಮ್ಮ ಸ
ಹೃ[೧೧]ದ್ವ[೧೧]ನಜಾತ ಪೀಠದಲಿ ಮಂಡಿಸಲೈದಿದ ಚಾರುವರ್ಣ ಸಂ
[೧೨]ಪದ್ವಿ[೧೨]ಧಿಯಾತ್ಮಸಿದ್ಧಿಕರಣಾ ಶರಣಾಗತವಜ್ರಪಂಜರಾ

೧೦೦

ಶ್ರೀಪರಮೇಶ ನಿತ್ಯಪರಿಪೂರ್ಣ ಸುಖಾಕರಮೂರ್ತಿಯೆಂಬ ಪಂ
ಪಾಪತಿ ಭಕ್ತಿ[೧೩]ಮುಕ್ತಿ[೧೩]ಮತಿಯಂ ನೆರೆಪಾಲಿಸಿ ನಿಮ್ಮ [೧೪]ಪಾದ[೧೪] ಸೇ
ವೋಪರತಿಪ್ರ[೧೫]ಸಂ[೧೫]ನ್ನಮನಮಲ್ಲದೆ ಬೇರೆದೆಯಾಡದಂತೆ ಮಾ
ಡೈ ಪರಮಾಪ್ತಸಾಧು[೧೬]ಶ[೧೬]ರಣಾ ಶರಣಾಗತವಜ್ರಪಂಜರಾ

---

೧ ಪಾದ (ಶಿ) ೨ ಮಿಂ (ಶಿ) ೩ ಗೆ (ಶಿ) ೪ ದವೀ (ಶಿ) ೫ ಮೋಲಿ (ಶಿ)
೬ ಕರು (ಮ), ಕರ (ಶಿ) ೭ ತ್ಕರ್ಷ (ಮ, ಶಿ) ೮ ಮಿ (ಮ)
೯ ರ (ಮ, ಶಿ) ೧೦ ದ್ವ (ಶಿ) ೧೧ ದ್ವ (ಶಿ) ೧೨ ಪಾದದ್ವಿ (ಶಿ)
೧೩ ಮುಕ್ತಿ (ಮ, ಶಿ) ೧೪ x (ಶಿ) ೧೫ ಪ (ಶಿ) ೧೬ ಶ (ಶಿ)

॥ ಶ್ರೀಗುರುಬಸವಲಿಂಗಾಯನಮಃ ॥

೧

ಶ್ರೀಪರಮೇಶ್ವರೀ ಗಗನದಂತೆ ವಿರಾಜಿಪುದೇನು ನೀಂ ಜಗ
ದ್ವ್ಯಾಪಕೆ ರಾಜಹಂಸಗಮನಾಂಚಿತೆ ವಿಶ್ರುತ ತಾರಕೋಪ ಸಂ
ದೀಪನೆ ಸತ್ಪಯೋಧರ ವಿಡಂಬನ ಶೋಭಿತೆ ದಿವ್ಯರೂಪೆ ಪಂ
ಪಾಪುರಮಂದಿರೇ ವರದೆ ಸುಂದರೆ ನೀಂ ಭುವನೈಕನಾಯಕೀ

೨

ಶ್ರೀಮಹದಾದಿಕಾರಣೆ ಗಣೇಶಮುಖಾಮರಸೇವ್ಯಮಾನೆ ಭ
ಕ್ತಾಮಯ ಭಂಜನೇ ಶಿವೆ ನಿರಂಜನೆ[೧]ಮಂಜುಲ ವಾಗ್ವಿಲಾಸೆ ೧ಸಿಂ
ಷ್ಕಾಮೆ ಭವತ್ಪ್ರಸಾದಕತಿಸಾದರದಿಂ ಸೆರಗೊಡ್ಡಿ ಬೇಳ್ವೆ ಮ
ತ್ಕಾಮಿತಮೀವುದಮ್ಮ ಶರಣಮ್ಮ ರಮೇ ಭುವನೈಕನಾಯಕೀ

೩

ನಿನ್ನ ಕಟಾಕ್ಷವೀಕ್ಷಣ ವಿಶಾಲತಟಿಲ್ಲತಿಕಾಂಶಮೂಲಮಂ
ಬುನ್ನತಮೈದಿ ಕಾಣದ ಸರೋರುಹ ಸಂಭವ ಮುಖ್ಯ ಮೂರ್ತಿಗಳ್
ಸನ್ನುತಿಗೈದು ಸೋತು ೨[ಮೊ]ಂಗದಲ್ಲಿಯುರಸ್ಥಲದಲ್ಲಿ ದೇಹದ
ನ್ಯೋನ್ಯ ಸಮಾಂಶದಲ್ಲಿ ನೆಲೆಗೊಟ್ಟು ಕೃಪಾರಸಮೆಂಬ ಶಾಂತಿ ಸಂ
ಪನ್ನತೆಯಿಂ ಪ್ರನೀತರಹರಮ್ಮ ಶಿವೇ ಭುವನೈಕನಾಯಕೀ

೪

ತಪಿತ ತಪೋಮಯಾಗ್ನಿ ಘನಮಾಗಿರೆ ಮನ್ಮಥವೀರ ಮುಕ್ತ ಸಂ
ಕುಪಿತ ಶಿಲೀಮುಖಂ ವಿರಹವೇಕಿಯನಿಮ್ಮಡಿಮಾಡಲೆಂದು ನೀಂ
ನಿಪುಣತೆವೆತ್ತು ಶೈವಗುಣಮೂರ್ತಿಗೆ ಸದ್ರಸಸೇಚನೋಪಶಾಂ
ತಿ ಪರಸಿ ಕಾಯ್ದೆ ಶಾಂಕರಿ ಪರಾಕು ಶಿವೇ ಭುವನೈಕನಾಯಕೀ

೫

ಜನನಿ ತಮೋವಿಮೋಚನ ವಿಲೋಚನರೋಚಿಗಳಿಂ ಮಹೇಶನಾ
ನನ ಸರಸೀರುಹಾಬ್ಜ ಶತಪತ್ರ ಕುಶೇಶಯ ಪದ್ಮಮೋದ ಸಂ
ಜನಿಸೆ ಪರಾಗ ಕೇಸರಿಗಳಂತೆ ವಿಭೂತಿ ಜಟಾರುಣತ್ವಗಳ್
ಮನಸಿಗೆ ಮಂಗಳಂ ಬೆರೆಯೆ ಮೆಚ್ಚಿಸಿದೌ ಭುವನೈಕನಾಯಕೀ

---

೧ ಸಿ (ಮ)     ೨ ಮು (ಮೂಲ)

೬

ಇಂದ್ರಮಹೇಂದ್ರಜಾಲ ಶತಕೋಟಿಗೆ ದೃಕ್ಕೆನಲಾಂ[ದ]೧ನಿನ್ನ ನಿ
ಸ್ತಂದ್ರ ಪ್ರಪಂಚಜಾಲಮದನೂಹಿಸಲಾರದೆ ತಥ್ಯ ಮಿಥ್ಯಗಳ್
ಚಂದ್ರ ದಿನೇಂದ್ರ ದೇವ ವಸುಮಾನವ ಮೌನಿ ವಿರಿಂಚಿ ವಾಸವೋ
ಪೇಂದ್ರ ದಿಗೀಶರೆಲ್ಲ ಕಡುನಾಚಿದರೌ ಭುವನೈಕನಾಯಕೀ

೭

ಚಂಡಿಕೆ ನಿನ್ನ ವೈತರಣಸಂಭವಕೀರ್ತಿ ಮೃಗಾಕ್ಷಿ ಸನ್ನುತಾ
ಖಂಡಲಕಾಂಡಕಾ ಶುಗಭುಗಾಹಿತ ತುಂಡಕೆ ದಿವ್ಯಲೋಕವೇ
ತಂಡಕೆ ಪುಂಡರೀಕಗಳ ಷಂಡಕೆ ಕೆಂಡಕಟಾಹದೊಳ್ಜ್ವಲ
ತ್ಪಾಂಡುರತಾ ವಿಡಂಬನವು ಪರ್ದಿಪಳೌ ಭುವನೈಕನಾಯಕೀ

೮

ದೀನಮನೋಹರೇ ದಿವಿಜಧೇನು ಸಹಸ್ರಕದೇನು ದಿವ್ಯ ಸಂ
ತಾನ ಸಹಸ್ರಕುಂ ಮಣಿಸಹಸ್ರಕೆ ಸಾಧ್ಯಮೆಯುಷ್ಮದೀಯ ಪಾ
ದಾನುಸಮರ್ಚಕಾಂಘ್ರಿತಲಧೂಳಿಲತಾಂಗಿ೨[ಯು]೨ ನಿತ್ಯದಾನ ಸಂ
ಧಾನ ವಿಧಾನವೈಖರಿಯು ಬಣ್ಣಿಪುದೇಂ ಭುವನೈಕನಾಯಕೀ

೯

ತರ್ಕ್ಕ ವಿಚಿತ್ರರೂಪ್ರ ಶತಧಾ ಶತಕೋಟಿ ಸಹಸ್ರಧಾಮನ
ಕ್ಕರ್ಕ್ಕದವೆಕ್ಕಸಂಬಡಿಪ ದೃಶ್ಯವದಂ ನೆರೆ ಕಾಬುತಪ್ಪುದೇ
ದೃಕ್ಕುವದಾಗೆ ಮೇಣುಭಯ ಸಾಕ್ಷಿಕಳಾದಿ ಜಗತ್ಪ್ರಪಂಚದೊ
ಳ್ಮಕ್ಕಳ ಪೆತ್ತು ಬಲ್ಲಿದೆಯರೆಲ್ಲರಿಗಿಂ ಭುವನೈಕನಾಯಕೀ

೧೦

ಭೂತಪತಿತ್ವಮೇಂ ಭುಜಗಭೂಷಣಮೇಂ ತಲೆಯೋಡೊಳುಂಬುದೇಂ
ಕಾತರಮಸ್ಥಿಮಾಲಿಕೆಗಳೇಂ ಮರುಳಾಟಮದೇನು ಬೂದಿಮೈ
ಯ್ಯೇತಕೆ ಬಗ್ಗಪೆದ್ದೊಗಲಿದೇನು ವಿಡಂಬನವಾತ ಗಂಡನೇಂ
ಕೌತುಕಮಾದುದೇಂ ಗರತಿ ಮಾಟವಿದೌ ಭುವನೈಕನಾಯಕೀ

---

೧ ದೆ (ಪಾಠ)  ೨ ಯು (ಪಾಠ)

೧೧

ಕಂಟಕಕುಬ್ಬಸಂ ಕಲುಷಜಾಲಕೆ ಮುಮ್ಮಳಿ ಜೇಷ್ಠಳೆಂಬ ಬ
ಲ್ಬಂಟಿಗೆಯೆಂಟನೇ ಶನಿಯು ಭೂತಗಣಾದಿಯುಮಾಂಗಜರ್ಗೆ ಮೇಣ್
ಗಂಟಲಗಾಣಮಾಗಿ ತದನುಸ್ಮೃತಿಯೆಂಬ ವಿಶುದ್ಧಶಬ್ದಮೇ
ಲುಂಟು ನಿರಂತರಮವರೊಳೊಪ್ಪಿದೆ ನೀಂ ಭುವನೈಕನಾಯಕೀ

೧೨

ನೂಕುವ ನಾಕಮಂ ಬಿಡದೆ ತಾಗುವ ಲೋಕವನೇಕಮಂದು ನಾ
ಳೀಕಭವಾಂಡಕಾತು ನಿಜವಿಕ್ರಮ ಶಾಸನ ಭೀಕರಾತ್ತ ಕೋ
ಪಾಕರನಾದ ಮತ್ತಮಹಿಷಾಸುರನಂ೧[ದು]೧ರುಶೂಲಕಿಕ್ಕಿ ಮೇಣ್
ಭೂಕಮಲಾಕ್ಷಿಯಂ ಪೊರೆದೆ ಭಾಪು ಭಳೀ ಭುವನೈಕನಾಯಕೀ

೧೩

ದಾನವ ತಾರಕಂ ಮುಳಿದು ದೇವಪುರಂ ಸೆರೆಗೊಂಬುತಿಂದ್ರನಂ
ದಾನವ ಬೇಡಲೈಸೆ ಶರಣಾಗತಪೋಷ ಕುಮಾರನಿಂದ ತ
ದ್ದಾನವಮಾಗೆ ತನ್ನಗರಮಾ ಸುರನಾಥಗೆ ಪಟ್ಟಗಟ್ಟಿದಂ
ದಾನವ ಸತ್ಯಪಾರಸವ ನೀಡು ಶಿವೇ ಭುವನೈಕನಾಯಕೀ

೧೪

ಚಾರುದರತ್ವಮಂಬುದಗುಣಂ ನೆರೆವಿದ್ರುಮ ಧರ್ಮಮಂದು ವೈ
ಸಾರಿಣ ಭಾವಮಾಂತು ನಯಸೋಷ್ಠ ಸುಕುಂತಲ ಕಂಠದೇಶಗಳ್
ತೋರಿದುವಮ್ಮ ನಿನ್ನನು ಮಹಾಕರುಣಾಂಬುಧಿಯೆಂಬುದಾವ ವಿ
ಸ್ತಾರಮೆ ಸದ್ಗುಣಾವಳಿಯ ರತ್ನಗಳಿಂ ಭುವನೈಕನಾಯಕೀ

೧೫

ಶರಣು ಚಿದಂಬರೇ ವಿಧೃತಶಂಬರೆ ಸನ್ನುತ ದೇವ ತುಂಬುರೇ
ಶರಣು ಮದಂಬಿಕೇ ಶತದಳಾಂಬಕೆ ದಾನವ ಭಂಜನಾಂ೨[ಬಿ]೨ಕೇ
ಶರಣು ಮಹಾಶಯೇ ವಿಮಲ ಸಚ್ಛಯೆ ಕೋಮಲ ಹೃತ್ಕುಶೇಶಯೇ
ಶರಣು ವಿನಾಯಕೇಪ್ಸಿತವಿ೩[ದಾ]೩ಯಕೆ ಶ್ರೀಭುವನೈಕನಾಯಕೀ

---

೧ ದಿ (ಮೂಲ)   ೨ ಬ (ಮೂಲ)   ೩ ಧಾ (ಮೂಲ)

೧೬

ಗುಣಗಣರತ್ನಭೂಷಣಮುಯಾಂಗಿಗಲಂಕೃತಿಯೇ ಕಟಾಕ್ಷವೀ
ಕ್ಷಣ ಘನಕಾಂತಿಯಿಂ ಬೆಳಗು ಬೀರಲು ಜ್ಯೋತಿಯದೇಕೆ ಸರ್ವಲ
ಕ್ಷಣಯುತ ಸತ್ಕಳಾಕರಿಗೆ ಸನ್ನುತ ಪದ್ಯಮೆ ಭಕ್ತವತ್ಸಲರ್
ತೃಣವ ಮಹತ್ವಮೆಂದು ನಲಿದೊಪ್ಪುವರೌ ಭುವನೈಕನಾಯಕೀ

೧೭

ನಾದವಿನೋದಿನೀ ಕಲುಷಭೇದಿನಿ ಪಾಲಿತಮೇದಿನೀ ಗುಣೋ
ಲ್ಹಾದ ಪರಂಪರೇ ಧೃತಸುಧಾಕರೆ ರಾಕ್ಷಸಭೀಕರೇ ಬೃಹ
ಜ್ಜಾದಿ ವಿಭೂತಕೇ ದಳಿತಪಾತಕೆ ಕರ್ಮವಿಧೂತಕೇ ದಮ
ಸ್ತೋಮದವಿ೦[ದಾ]೧ಯಿಕೇ ಜಗದುಪಾಯಿಕೆ ಶ್ರೀಭುವನೈಕನಾಯಕೀ

೧೮

ಕೋಮಲ ನೀಲ ಭಾಸ್ವದ ಕಳೇಬರವೊಪ್ಪಿತು ನಿರ್ಗುಣೈಕ ಚಿಂ
ತಾಮಣಿಧರ್ಮಮೆಂದಳಿದೆ ಸಾನುಮದುದ್ಭವೆಯಾ೨[ಗಿ]ಅಮೃಚ್ಛಿಲಾ
ನೇಮಕ ಮೂರ್ತಿಯಿಂ ವಿಷಯ ಪಾರ್ಥಿವ ಭಾವಕೆ ಚಿತ್ತವಿತ್ತೆ ಪಂ
ಪಾಮಹದಾದಿನಾಯಕೆ ಚಿದಾತ್ಮಕೆ ಸ್ಸೈ ಭುವನೈಕನಾಯಕೀ

೧೯

ಬಾಲ ಕುಮುದ್ವತೀರಮಣಭೂಷಿತ ಕೋಟಿದಿನೇಶ ಪೂರ್ವರು
ಗ್ಜಾಲಜ್ವಲಜ್ಜಟಾಪಟಲ ಚಾರು ಮನೋಹರ ಮೂರ್ತಿ[ಯಿಂ] ಕಣಾ
ಸೋಲದೆ ತೂಗಿತೌ ಭಸಿತ ಕುಂಕುಮ ಗಂಧ ಹರಿದ್ರಲಿಪ್ತ ವೈ
ಶಾಲ ಮನೋಜ್ಞತಾ ವಿಷಯ ಫಾಲಮದುಂ ಭುವನೈಕನಾಯಕೀ

೨೦

ಕಾಳಿಗೆ ಕಂಜಮಿತ್ರನು ಪಟೀಯನು ವಾಸರದಲ್ಲಿ ಮೇಣ್ ಮಹಾ
ಕಾಳಿಗೆ ಕಾಲಮಾತ್ರದಲು ಪಾಪತಮಕ್ಕೆ ಪ್ರತೀತಿ ಬಾರದೊ
ಲ್ಕಾಳಿಗೆ ಕಾದಮುಂ ಕರಗಿಪಂತೆ ಪಟುತ್ವಮದುಂಟು ಒಡ್ಡಿವ
ಕ್ಕಾಳಿಗೆ ಲೋಭಿ ತಾಂ ದೊರೆ ಕುಬೇರನಿಗೇಂ ಭುವನೈಕನಾಯಕೀ

---

೧ ಧಾ (ಮೂಲ) ೨ ಗೆ (ಮೂಲ)

೨೧

ಕಚರಚನಾ ಚಮತ್ಕೃತಿಗೆ ಮಂಗಳಮಾನಸಮೆತ್ತಲಾದುದೀ
ಕುಚಭರಕೂರ್ಜಿತಂ ನಮಿಸಲೊಪ್ಪಿತು ಮೂರ್ತಿಯು ತದ್ವಯಂಗಳಿಂ
ದಚಲನ ಭಕ್ತಿ ದರ್ಶನಗಳಿಂಪು ಪರಸ್ಪರಮಾಗಲಾಗಲೆಂ
ಬುಚಿತವಚೋವಿಲಾಸದಭವಾಂಗನೆ ಬಾ ಭುವನೈಕನಾಯಕೀ

೨೨

ತನು ಕರಣೇಂದ್ರಿಯಂಗಳನು ಧಾವಿಸಲೈಸೆ ಪದಾರ್ಥದಲ್ಲಿ ಮೋ
ಣ್ಮನಮೆಡೆಗೊಂಡ ಮಾಳ್ಕೆಯದರಿಂದನುಯೋಜಿಸಲಾತ್ಮನನ್ತಿರ
ಲ್ಕಿನಿತು ಗುಣತ್ರಯಂಗಳು ನಿರಸ್ತ ಚರಾಚರ ಸೂಕ್ಷ್ಮ ಚಿತ್ಕಳಾ
ಘನಪದದೈಕ್ಯಮೌ ಭವದಧೀನತೆಯಿಂ ಭುವನೈಕನಾಯಕೀ

೨೩

ಮಾರವಿರಾಗ ಸಲ್ಲಲಿತ ಮೋಹನ ನಾಟಿ ಕುರಂಜನಂಗಳಿಂ
ದಾರಭಿ ಗೀತಸಾರಗಳು ಪಾಡಿದಡಿಲ್ಲ ಭವತ್ಪ್ರಸಾದಮಂ
ಭೈರವಿ ಗೌರಿ ದೇಶಿಕೆ ನಿರಸ್ತ ಶಿವೇಶ್ವರ ಭಕ್ತಿಯಿಂದ ಘಂ
ಟಾರವಮಾಗಲೈಸೆ ನಡುನಾಲಗೆಯಿಂ ಭುವನೈಕನಾಯಕೀ

೨೪

ಕಾಯವೊ ಕಾಲವೋ ಗುಣವೊ ನಾದವೊ ನಾಡಿಯೊ ಶಬ್ದ ವಂ[ರ್ಣ][೧]ವೋ
ಬಾಯಿಲಿ ಬೊಮ್ಮವೆಂಬ ನುಡಿ ಸಾಕು ಶಿವೈಕಮತಾನುಭೂತಿ ಚಿ
ನ್ಯಾಯ ಸು[೨]ದೋ[೨]ಪದೇಶಕೆಯು ದೇಶಿಕೆ ಪಾಲಿಸು ನಿತ್ಯ ನಿರ್ಮಲೋ
ಪಾಯಮಯಪ್ರಪಂಚಕೆ ಮದೀಪ್ಸಿತಗಳ್ ಭುವನೈಕನಾಯಕೀ

೨೫

ಕರುಣಿಸು ಕಾಮಿತಂ ಕಿಸಲಯಾಂಬಕೆ ಕೀರವಿಲಾಸೆ ದುರ್ಭವಾಂ
ಕುರಹರೆ ಕೂರ್ಮೆಯಿಂ ಪರಮ ಕೇವಲ ಕಾರಣೆ ಕೈರವಾಪ್ತಶೇ
ಖರೆ ನವಕೋಮಲಾಂಗಿ ಮುನಿ ಕೌಶಿಕವಂದಿತೆ ಕಂಜಸಂಭವಾಂ
ಡರುಚಿರ ವೈಭವಂ ರಚಿಸೆ ಕಃಪದವೌ ಭುವನೈಕನಾಯಕೀ

---

೧ ನ್ನ (ಮೂಲ) ೨ ದೂ (ಮ)

೨೬

ಮಂಗಳ ಸಂಗತಿಂ ಗಜ[ಕ್ಕೆ] ಚಿತ್ರವಲಾ ನಖಜಾಲತಾರಕಾ
ಸಂಗತಿ ಪಾದಗಳ್ಗೆಯದು ಚಿತ್ರವಲಾ ನವಮಾರ್ದವಾಬ್ಜಕೋ
ಶಂಗಳು ಸಂಕುಚೋಪಮಮಿರಲ್ ಕಠಿನತ್ವಮದಂತೆ ನೀನು ಮಾ
ತಂಗಗೆ ವಕ್ಷಗುಂ ಗಿರಿಗೆ ಪುತ್ರಿಯಳೌ ಭುವನೈಕನಾಯಕೀ

೨೭

ಹರಿಗವಗಾಹನಂ ಶಿವಗೆ ಕುತ್ತಿಗೆಮಟ್ಟವನಂತಸಿಂಧುವಾ
ಕ್ತರುಣಿಯರ್ಕೈದು ಗುಪ್ತಸಹಗಾಮಿಗಳಾದರು ಮಿಕ್ಕರಂ ಗಡಿ
ನ್ನರಿವು ಯುಷ್ಮದೀಯ ತನು ನೀಲರುಚಿ ಪ್ರಬಲಾರ್ಕ ಸಂಭವ
ಳ್ಪರಿಯಲು ಪೂರ್ವ ಸಂಗತಿಯುಂದಂಗವಲಾ ಭುವನೈಕನಾಯಕೀ

೨೮

ದಾನವನೆನ್ನಲುಂ ಜಿಗಿವುತಾರ್ಭಟ ಘೋರ ಕಠೋರನಾದದಿಂ
ದೀ ನಿಖಿಲಪ್ರಪಂಚ ನಿಬಿಡೀಕೃತಮಾಗೆ೨[ಯು]೨ವರ್ಣಮಾಲಿಸ
ಲ್ಕಾನದೆ ದೈತ್ಯವಿಪ್ರಗಣವೋಡಿತು ಕೂಡಿತು ಭಾಪು ನಿನ್ನ ಪಂ
ಚಾನನವೇಗಮಾತ್ಮಬಲಮೀಗೆ ಸದಾ ಭುವನೈಕನಾಯಕೀ

೨೯

ಅರಿದ೩ರೆ೪ ಪಂ೪ಕಳಭಂಗ ಜಡರಾಸಿಗಳಿಂ ಪರಿಪೂರ್ಣಮಾಗಿ ದು
ಸ್ತರಗಹನತ್ವಮಾಂತ ಭವಸಾಗರಮಾ ರಘುವೀರ ಕಟ್ಟಿ೫[ತಾಂ]೫
ಸರಿಸನು ಭಾರ್ಗವಂ ಕುಡಿಯ ಕುಂಭಜನಿಂತಿದು ಪಾರುಗಂಡರಾ
ರ್ಕರುಣಿಸಿ ದಾಟಿಸೆನ್ನ ನವಕರ್ಣಧರೇ ಭುವನೈಕನಾಯಕೀ

೩೦

ಕಡೆಮೊದಲ್ಕೆಸಿ ತೋರದ ತರಂಗ ಪರಂಪರೆಯಬ್ಧಿಯುಲ್ಲಿ ಸಂ
ಗಡಿಸಿ ವಿಲೋಕನಕ್ಕುಪರಮಾದಿಗ೬ಳಿ೬ಲ್ಲದೆ ಮಾಳ್ಕೆಯಂದೊಡಂ
ಬಡಿಸದು ಸಾಕು ಜನ್ಮಶತಕೋಟಿಗೆ ೭ತೋ೭ರದ ತತ್ತ್ವದಂಗ ದೊಂ
ಗಡದೆಡೆಯಾಟವೊಲ್ಲೆ ಶರಣಾಗು ಶಿವೇ ಭುವನೈಕನಾಯಕೀ

---

೧ ಗ (ಮ) ೨ ವ (ಮೂಲ) ೩ ರ (ಮ) ೪ ಗ (ಜ)
೫ ನೇಂ (ಮೂಲ) ೬ ಳ (ಜ) ೭ ತೀ (ಜ)

೩೧

ಬಿದಿ ನೆರೆ ಪುಟ್ಟಿಪಂ ಪೊರೆವ ಕಾರೊಡಲಂ ಕಿಡಿಗಣ್ಣ ನೊಪ್ಪಿಪಂ
ತುದಿಗೆ ವಿಚಿತ್ರವಮ್ಮ ಬಹುನಾಯಕರೇರಿದ ಬಂಡಿ ಸಾಗದಂ
ಬುದು ನಿಜಮೀ ಗುಣತ್ರಯಗಳಾದಿ ಚಿದೈಕ ಸಕರ್ತೃಕಂಗಳೋ
ತದಿತರಮೇಕಮೇವಮದು ಬೊಮ್ಮಮಂ೧[ದೌ]೧ಭುವನೈಕನಾಯಕೀ

೩೨

ವಾಮನ ದಾನವಾರಿ ಕರಮಿಟ್ಟಡಿಗೈಯುತ ದಕ್ಷಿಣಾಸೆ೨[ಯಿಂ]೨
ತಾಮನುಸೇವಿಸಲ್ಕೆ ಕಡುಮಧ್ಯಮನಾದನು ವಿಪ್ರಜನ್ಮದೊಳ್
ಈ ಮಹಿಬಲ್ಲುದಾತನೆ ತ್ರಿವಿಕ್ರಮಮೂರ್ತಿಯು ಲೋಗರಲ್ಲಿ ೩[ದಿ]೩
ಕ್ಸಾ೪[ಮಜ]೪[ಸು]ಪ್ರಸಿದ್ಧಗೆ ಕುಯಾಚನಮೇಂ ಭುವನೈಕನಾಯಕೀ

೩೩

ಬಡತನಮಿರ್ದಡೇಂ ಕೊಡುವ ದಾತಗೆ ದುಷ್ಟ[ದು]ದೊಡ್ಡವಲ್ಲ ಮೇ
ಣ್ಕೊಡದಲೆಯಾದ ಲೋಭಿ ಧನದಾಸೆಯನೈದಲು ಸಾರ್ವಭೌಮನಾ
ದಡೆ ಗಡ ನಿಷ್ಕರೇಣುಮನಲೊಪ್ಪದಲುತ್ತರಮೈಸೆ ಮುಂದೆಯೊ
ಪ್ಪಿಡಿಗೆಡೆಯಾಗೆ ಸದ್ಗತಿಗೆ ಬೀಗಿಸಿದೌ ಭುವನೈಕನಾಯಕೀ

೩೪

ಪಿಡಿಗನುವಾಗೆ ಕೇಸರಿಗೆ ಪಾಸಟಿಯಾದುದು ಮಧ್ಯಮಕ್ಷಿಗ
ಳ್ಪಡೆದ ಸುತಾರಕಾಸ್ಪದಗಳುತ್ಪಲ ಸಂಪದಮಾಂತವಿಂತು ಮೇ
ಣಡಿಗಳು ಪಲ್ಲವೋತ್ಕರಗಳಾಗಿ ಮಹಾ ಮುನಿಮಾನ್ಯವಾದು೫ವೌ೫
೬ವಡಗದೆ ನಿನ್ನ ಸೇವಿಸಲು ಮತ್ಸರಮೇಂ೬ ಭುವನೈಕನಾಯಕೀ

೩೫

ಕುಚಕನುವಂ ಗಿರೀಶನು ಮೊಗಂ ನೆರೆ ಪೊಂದಿದ ಸೋಮನೊಪ್ಪಿದಂ
ಕಚದಲಿ ನೀಲಕಂಠನು ಕರಂ ಕಟಿಯುಪ್ಪಿದ ಪಂಚವಕ್ತ್ರನ
ಭ್ಯಚಲಿತ ರೋಮರಾಜಿಯಲಿ ನಾಗಕಲಾಪನು ರಾಜಿಪಂ ಮಹಾ
ವಿಚಲ ಶಿವಸ್ವರೂಪಿ ನಿನಗಾರೆಣೆಯೌ ಭುವನೈಕನಾಯಕೀ

---

೧ ದೊ (ಮೂಲ) ೨ ಯಂ (ಮೂಲ) ೩ ರು (ಮೂಲ) ೪ ಯಜ (ಮೂಲ)
೫ ದೌ (ಮ) ೬ x (ಮ)

೩೬

ದಾನಿಗೆ ಕರ್ಣತಾಲಸದನಿಂದಿತ ಸದ್ಗತಿಯುಪ್ಪುತುಂ ಘನ
ಶ್ರೀನಿಧಿನಾಥನಾಗಿ ಬಗೆಗೈವುದು ನಿಚ್ಚಮ ಪದ್ಮ ಭಾವಮಂ
ದಾನದಿ ಶೋಭಿಸಿತ್ತು ಪಶುವಾದಡು ಶಾಂಭವಿ ನಿನ್ನ ಭಕ್ತಿಯಿಂ
ಮಾನವಜನ್ಮದೊಳ್ ಕೊಡುವುದೇ ಕೊಡು ತಾಯ್ಭುವನೈಕನಾಯಕೀ

೩೭

ದಕ್ಷಸುರಕ್ಷಿತಾಖಿಲ ವಿಲಕ್ಷಣ ವೈಭವವಧ್ವರಾಂಗಣೋ
ದೀಕ್ಷೆಯ ಮಂಟಪಂ ಯಜನಯಾಜನಸಂಭೋಜನಸಂಭೋಜನಂಗಳಿಂ
ದಕ್ಷಯಮಾದುದೇ ಶಿವಶಿವಾ ಪರದೇವತೆಯಿಂ ಪರಾಙ್ಮುಖಂ
ಲಕ್ಷ್ಯಕೆ ತಂದನೇಂ ನಿಜಭವಿಷ್ಯತೆಯುಂ ಭುವನೈಕನಾಯಕೀ

೩೮

ಶುಂಭನಿಶುಂಭರೇ ಪಶುಗಳಧ್ವರಮಂಟಪಮಾಜಿಚತ್ವರಂ
ಕುಂಭಿನಿಯೊಪ್ಪಲುಂ ಪಟುಧನುಸ್ವನಮಾದುದು ಮಂತ್ರಘೋಷಮಿ
ನ್ನೇಂ ಭುಜವಿಕ್ರಮಾನಲಮಿರಲ್ಕಡೆಯಾಜಕನಿಂದ ದಾನವಾ
ಲಂಭಚರಿತ್ರೆಮೈಸಿದೆಲೆ ಶಾಂಭವಿ ನೀಂ ಭುವನೈಕನಾಯಕೀ

೩೯

ಕಾಣದ ಲೋಕಮಾತೆಯನು ಕೈಪಿಡಿದರ್ದನುಜಾತರಾತ್ಮಕ
ಲ್ಯಾಣಕೆ ಸೋಲಲಂದು ನಿಜಮಾದೊಡೆ ಮತ್ಪತಿ ಪಂಚವಕ್ತ್ರ ನಿ
ನ್ನಾಣತೆಯುತ್ತಮಾಂಗದೊಳು ಪಂಚತೆಯಿಲ್ಲದಿರಲ್ಕೆಯಿತ್ತೆ ಮೇ
ಣ್ಪ್ರಾಣಕದೇಕೆ ಬಾಣ ಕರಣಂಗಳಿಗೇಂ ಭುವನೈಕನಾಯಕೀ

೪೦

ಜಯತು ಮಹೇಶ್ವರೀ ಜಯತು ಜನ್ಮಜರಾಮರಣಾದಿ ಕಷ್ಟ ದು
ರ್ಭಯ ಪರಿಹಾರಿಣೀ ಜಯತು ಹೈಮವತೀ ಭ್ರಮರಾಂಬಿಕಾ ಶಿವಾ
ಜಯತು ಜಗನ್ಮಯಾ ಭಗವತೀ ವರದಾ ಜನನೀ ಶುಭಾತ್ಮಿಕಾ
ಜಯತು ಪರಾತ್ಪರಾ ಜಯತು ಶೈವಸತೀ ಭುವನೈಕನಾಯಕೀ

---

೧ x (ಜ)

೪೧*

ಓದಿಗೆ ಮುಟ್ಟಲೋದುವುದು ಕಾದಿಗೆಯಾದಿಗೆ ಮೂಲವಾದ ಚಿ
ನ್ನಾದವೆ ಬಿಂದುಕಳೆಯಾದ ಮಹಪ್ರಣವೈಕ ವಿಶ್ವಸಂ
ಪಾದನಮಂದು ನಿನ್ನೊಳು ಸಮರ್ಪಣೆಯಾಗಿ

೪೨

ಕಂಗಳು ಭೂಮಿ ಮಾರುತ ಮರುತ್ಸಖ ಮೂಲಗಳಲ್ಲಿ ಕೂಡಿ ಲೋ
ಕಂಗಳು ಪುಟ್ಟಿದಂದು ಬೃಹದಂಡವು ನಿರ್ಮಿಸಿ ಕಂಗಳೆಂಟರಿಂ
ಕಂಗಳನಿತ್ತು ನಾಲ್ಕು ಭುವನಂಗಳ ಮಾಡೆನಲಾಗ ಸರ್ವಲೋ
ಕಂಗಂ[ಳ]೧ ನಿರ್ಮಿಸೆನ್ನಲದಕಾಗದುದೌ ಭುವನೈಕನಾಯಕೀ

೪೩

ಕರಚರಣಾಕ್ಷಿನಾಶಿಕವಚಃಶ್ರುತಿಮುಖ್ಯಗಳಿತ್ತೆ ಕಾರಿಜಮ್
ಸರಿಯೊಡಲಿತ್ತದೇಕೆ ಬಹುಶಃ ಕಡು ಸಿಬ್ಬತಿಗೊಂಬುದಕ್ಕೆ ಮೇ
ಣೆರಲಿ ಪರಂತು ದೇಹಮನು ತಾಳಿ ಮನುಷ್ಯರ ಬೇಡಿಬೇಡಿ ಬಾ
ಯ್ದೆರೆವುದು ಒಲ್ಲೆನೊಲ್ಲೆ ಕೊಡಲಾಗದು ಹಾ ಭುವನೈಕನಾಯಕೀ

೪೪

ಬೇಡಿದಡೀವುದೇ ಘನತೆ ಬೇಡದಲಿಪ್ಪುದದಕ್ಕು ಮೇಲ್ಕಣಾ
ಬೇಡುವುದೀಯದೀ ಗುಣಯುಗಂ ಯುಗಮಾತ್ರದಿ ಜನ್ಮಕೋಟಿಗುಂ
ಮಾಡದಿರಮ್ಮ ನಿಮ್ಮ ಮಹದೂರ್ಜಿತಮೂರ್ತಿ ಸಪರ್ಯಭಾಗ್ಯಮಂ
ಬೇಡಿಗೆ ನಿಲ್ಕಲಿನ್ನು ಮನುಜೇಶ್ವರನೌ ಭುವನೈಕನಾಯಕೀ

೪೫

ವನವನಜಾಕ್ಷಿಯಂ ತಲೆಯೊಳಿಟ್ಟ ಮಹಾಚಲನಾಥಜಾತಟಿ
ಧ್ವನ ವಿಮಲಾಂಗಿಯಂ ತೊಡೆಯೊಳಿಟ್ಟ ವಿಷಾದಮದಾತನಿಗೆನ್ನೊಳೊಂ
ದಿನಿತುಮದೇಕೆ ಕೌಮುದಿಯ ಸೋಮಸಮಾನ೩[ದಧೋರ್ಧ್ವ]೪ ದಿಕ್ತಟಾಂ
ತನ ಗಮನಕ್ಕೆ ಋಕ್ಷಪದಮೆಲ್ಲಿರಲೇಂ ಭುವನೈಕನಾಯಕೀ

---

* ಮ ಮತ್ತು ಜ ಎರಡೂ ಪ್ರತಿಗಳಲ್ಲಿಯೂ ಈ ಪದ್ಯ ಇಷ್ಟೇ ಇದೆ.
೧ ಳು (ಮೂಲ)     ೨ ಗಿ (ಮ)     ೩ ದೂರ್ಧ (ಮೂಲ)
೪ ದಿಕ್ತಟಾಕಾಂತನಿಗೆ ಮನಕ್ಕಾಯು (ಮ)

೪೭

ಕಾಮನ ಚುರ್ಚಲೆಂ ಸಗುಣಧಾರ್ಮಿಕನೆಂ ಗತಪುತ್ರ ಮೋಹಮಂ
ನಾಮರೆಯಲ್ಕೆಯನ್ಯಜನೆ ಹಾ ಭವದಾತ್ಮಜರಿದ್ದು ಬಾಳಿ ನಿ
ಷ್ಕಾಮಿಗಳಾಗಲೆಂದು ಮನಮೀಶ್ವರನೊಲ್ಲದು ನಿಮ್ಮ ಸೇರದ
ಮ್ಮಾ ಮಗುಳೊಮ್ಮೆ ನೇಮಿಸು ಮನೋಲಯಂ[ಮಂ]೧ ಭವನೈಕನಾಯಕೀ

೪೭

ವಿತರಣವೊಪ್ಪಲಾಗಿ ಭವಸಾಗರಮೇನದು ದಾಟಲಾದುದೇ
೨ಮಿತಮಿದು ಸರ್ವಮಂಗಳೆ ಭವತ್ಪದಭಕ್ತಿಯ ಲೋಭಮಿದ್ದು ಸಂ
ತತಮನುದಾನವಾರಣತೆಯಂ ಪಡೆದಾಕ್ಷಣ ಬಂಧನಂ ಧರಾ
ಪತಿಗಳು ಮಾಡರೇ ಶರಣು ಪಾಲಿಸು ನೀಂ ಭುವನೈಕನಾಯಕೀ

೪೮

ವಿತತ ಪರೋಪಕಾರದಲ್ಲಿ ಸತ್ಪಥರೊಪ್ಪಿ ಶಿವಾರ್ಜಿತಾನು ಪ
ದ್ಧತಿ ವಿನಿಯೋಗಮಾಗಲಹುದೊಂದಕೆ[ನೋಡು]೩ ಮನೋಜನಂಗಮೊಂ
ದತುಳವಿಭೂತಿರೂಪಮನುಸಾರಿತು ನಿರ್ಜರ ಕಾರ್ಯದಲ್ಲಿ ಸಂ
ಪ್ರತಿಕರಮಾಂತ ಪಾವನ ಶತಾಂಗಪದಂ ಭುವನೈಕನಾಯಕೀ

೪೯

ಸಾಲುತರಂಗ ಸಂಗತಿಗೆ ಸಾಲುವನಂಕವಿಯೋಗದಿಂದ ಕೀ
ಲಾಲಮಯಪ್ರಪೂರ್ಣಮನಲೊಪ್ಪಿತು ತದ್ದನುಜಾಂಘಪಾಂಗವೈ
ಳಶಾಳಲ ಸರೋರುಹಾಕರಮದಲ್ಲಿ ಮುಖಾಕ್ಷಿ ಮಹೋತ್ಪಲಂಗಳು
ನ್ಮೀಲನಮಾಂತವೇಂ ಗತಶಿಲೀಮುಖದಿಂ ಭುವನೈಕನಾಯಕೀ

೫೦

ಶ್ರುತಿಪರಿಯಂತರಂ ಪಿಲಿಸದಾಯತಧರ್ಮಕ್ಕೆ ಚಂಚಲತ್ವಕು
ನ್ನತ ಭವದೀಯ ನೇತ್ರಸಹವಾಸದಿ ಮೇಳನಮಾಗಲಲ್ಲಿ ಸ
ಮ್ಮತಮಹ ಸರ್ವತೋಮುಖ ಸದಾಮಲನಾಮನಿಯುಕ್ತಳೆಂದು ಕೇ
ಳುತಲವನಾಂತಮನ್ಯಜಲಜಾತಗಳೊಯ್ಯನೆ ಪೊಂದಲಾಗಿ ನೀಂ
ಶತದಳನೇತ್ರೆ ಮೀನನಯನೇಶ್ವರಿಯಾದೆ ಶಿವೇ ಭುವನೈಕನಾಯಕೀ

---

೧ ಮೀ (ಮೂಲ) ೨ ಮಿ (ಮ) ೩ ನೋಡು (ಮೂಲ)
೪ ಕಾಲ (ಜ)

೫೧

ಕರಗದ ಮಾಟದಿಂದುರುಂಬುಂಕಂಧರಮು೨ಟ್ಟ೨ಡಿಮಾಡಿ ಮೆಟ್ಟಿಸ
ತ್ವರ ಶಿಖಿಯಾಗಿ ನಂಟುಳಿಸಿಕೊಳ್ಳದೆ ಮಧ್ಯದೊಳಿಟ್ಟು ಮೇಲಿನಂ
ಬ೩ಲಿ೩ದೆ ಪಯೋಧರಂಗಳೆನಲಾದುದೆ ಕಂಚುಕಧಾರಿಗಳ್ಗೆ೧ಯೆಂ
ದರೆ ಸರಿಯುನ್ಮುಖರ್ನೆಲವ ಕಾಣರಲಾ ಭುವನೈಕನಾಯಕೀ

೫೨

ಕಂಗಳು ನಾಲ್ಕು ನಾಲ್ಕೆರಡು ಕಂಗಳಲೊಪ್ಪಿದೆ ಸೃಷ್ಟಿಯಂ ಬಳಿ
ಕ್ಕಂಗಳು ತೋರದಾದೆ ಗತಿಯೇನೆನಲಿತ್ತೆ ನಿಜೈಕಸದ್ಯಸೇ
ಕಂಗಳು ತೋರ್ಪ ಚಿತ್ಕಳೆಯೊಳೊಂದು ಕಳಾಮಯುವಾದಡಿನ್ನು ಲೋ
ಕಂಗಳು ನಿರ್ಮಿಸಲ್ಕಭಯವಿತ್ತೆ ಶಿವೇ ಭುವನೈಕನಾಯಕೀ

೫೩

ಕಃಪದವಮ್ಮ ಬೊಮ್ಮ ಸಿರಿಯಾಣ್ಮರ ಪೋಷಣಮಬ್ಧಿಸಂಭವಾ
ಹಃಪತಿ ವಾಯುಮಿತ್ರನಯನಂ ಮಿಗಿಲಾದಡು ಪೆತ್ತಿನೀಂ ಸದೇ
ತಃಪರಮುಣ್ಮೆ ಲೋಕಜನನೀ ನಿನಗಾರೆಣೆ ಶಾಸ್ತ್ರದೊಳ್ನಮಾ
೪ತುಃ೪ಪರದೈವತಮ್ಮೆನುತ ಸಾರುವುದೌ ಭುವನೈಕನಾಯಕೀ

೫೪

ತನುವಿಡಿದಾತ್ಮರಾಶಿಗೆ ಬರಲ್ಬಹುಶಃ ಭವದೀಯ ಸತ್ವದಾ
ರ್ಜನಕನುವಾಗಲೇನೆನಲು ಹಬ್ಬಿತು ಶಾಂಭವಿ ವರ್ತಮಾನದೊಳ್
ಘನತರ ಭಕ್ತಿಯಿಂ ನಮಿಸಿ ಭೂತ ಭವಾಂತರಮಿಲ್ಲದಾಗ೫ಲಾ
ತನುಪದಮಂ ಪರಾಗಲೆರಡಂ೫ ಕ್ಷಮಿಸೌ ಭುವನೈಕನಾಯಕೀ

೫೫

ನಾರದಗಾನಮಾಲಿಸಿ ನಿನಾದಕೆ ನೀಂ ತಲೆದೂಗಲಾಗ ಮುಂ
ಜಾರಿದ ಮುಂಗುರುಲ್ಪಣೆಗೆ ಸಾರ೬ಲಿ೬ದೇ ದನಿಗೇಳಿ ವೇಣಿ ಕಾ
ಳೋರಗವಾಡಿಸುತ್ತಲಿಹ ನಾಲಗೆಗಳ್ನೆರೆದೋರಿದಲ್ತೆ ಶೃಂ
ಗಾರ ನಿಧಿ ಪ್ರಸಂಗದಲಿ ಕಾ೭ಯ್ವೆ೭ನದೇಂ ಭುವನೈಕನಾಯಕೀ

---

೧ ಬ (ಜ) ೨ ಟ (ಮ) ೩ ಲಿ (ಜ) ೪ ತಃ (ಜ)
೫ ಲಿನ್ನತನುಪದಮ್ಪರಾಗಲೆರಡಂ (ಮ) ೬ ಲ (ಮ) ೭ ಯ್ವ (ಮ)

೫೬

ನಾರಿಗೆ ಪಲ್ಲವಪ್ರಸರಮೈಸಲು ಮಾರನ ವೀರಂ[ನೆಂಬರೇಂ
ಸಾರ]೧ಸಮಂಚಿತಂ ಬಿಡದೆ ಬಂಡುಣಿವಂಗಡಿ ಬಿಟ್ಟೆನೆಂದು ಸೊ
ಕ್ಕಾರದಿ ನಿಮ್ಮ ನಾಮವನು ಸೇವಿಸಿದಾಕ್ಷಣ ನೈಜ ರೂಪಮಂ
ಸಾರಿತು ಚಾರುಗಾತ್ರೆ ಭ್ರಮರಾಂಬಿಕೆ ಬಾ ಭುವನೈಕನಾಯಕೀ

೫೭

ಶ್ರೀಕರಮಾಗಿ ತೋರ್ಪ ನಿಗಮಾಗಮ ಸನ್ನುತೆ ನೀನೆಯುತ್ತಮ
ಶ್ಲೋಕಳೆನಲ್ಕೆ ತಕ್ಕುದು ಗಣಾಯತ ನೇಮಕಮಕ್ಷರಾಕರಾ
ನೇಕ ಪದಾರ್ಥ ಸಮ್ಮಿಳಿತ ವೈಭವಮಿನ್ನನುಸಾರಿ ಸೇವಿಸಲ್
ಲೋಕ ಚತುರ್ದಶಂಗಳೊಳು ಮತ್ತುಳಿದೆಲ್ಲರನಾರುಬಲ್ಲರಿ
ನ್ನೀ ಕಮಲೋದ್ಭವಾಂಡ ಶತಕೋಟಿಗಳೇಂ ಭುವನೈಕನಾಯಕೀ

೫೮

ಪೂರ್ವಪರಾಗ ಸಂಘಟನದಿಂದುದಯಾಸ್ತಮಯಂಗಳೆಂಬವಂ
ಸಾರ್ವರು ಸತ್ವಥಾಸ್ಪದರು ಮಿಕ್ಕರು ಸಿಕ್ಕರು ಕಾಲಚಕ್ರದೊಳ್
ಗರ್ವಿಸಲಾದುದೇನು ಭವಿ ಭಕ್ತರು ನಿನ್ನಯ ಸೇವೆಯೊಳಿ
ನ್ನೀರ್ವರು ಚಿತ್ರಮೇನಿಹಪರಸ್ಥಿತಿಯೊಳ್ ಭುವನೈಕನಾಯಕೀ

೫೯

ಅಕ್ಷಿಗಳಾನನಾಧರಗಳಂಘ್ರಿಗಳಿಂದಲಮೋಘ ಮೂರ್ತಿ ಪ್ರ
ತ್ಯಕ್ಷಮದಾವಗಾಗಲಪೂರ್ವನಪೂರ್ವಮನೆಂತುಗಾ೨ಣೆ೨ನೀ
ಲಕ್ಷಣವೇನು ಬಲ್ಲಿ ಭವದರ್ಚಕರಲ್ಲಿಪ ಸಾಭಿಮಾನ೩ದಿಂ೩
ಲಕ್ಷಿಗೆ ತೋರಿದೌ ನಿಜಪದಸ್ಥಿತಿ ೪ಸೂಕ್ತ೪ಕಳಾ ವಿಶೇಷಮಂ
ಪಕ್ಷಗನಾಯಕಂ ನುತಿಸಿ ಕಾಂಬುವನೇಂ ಭುವನೈಕನಾಯಕೀ

೬೦

ಹರಿಹರ ಪದ್ಮಜರ್ಮೊದಲು [ಶುದ್ಧ] ಭವಚ್ಛುಭನಾಮ ಮುಖ್ಯ೫[ವೆಂ]೫
೬[ಬರು ನಿಜಮಾಗದಿರ್ದೊಡೆಯುಪರ್ಣೆಯುಮೇಯೆನಲಾದ ನಾಮಗಳ್]೬
೭ಸು೭ರುಚಿರಮಾ೮ದು೮ವೇ ಮನುಜಧಾರ್ಮಿಕರೊಯ್ಯನೆ ಭಕ್ತಿಯಿಂ ಸದಾ
ಸ್ಮರಿಸಲು ಕೊಳ್ಳರೇಂ ಜನರು ಸದ್ಗತಿಯುಂ ಭುವನೈಕನಾಯಕೀ

---

೧ ನೆಂಬುದೆಂತು ಸಂಸಾರ (ಮೂಲ) ೨ ಣ (ಮ) ೩ ವಿ (ಮ) ೪ ಸ್ತೋಕ (ಮ) ೫ ರೇ (ಮೂಲ) ೬ ಬರು ನಿಜಮಾಗದಿರ್ದೊಡೆಯುಪರ್ಣೆಯುಮೆಕಮಲೆಯೆನಲಾದ ನಾಮಗಳ್ (ಮೂಲ) ೭ ಸ (ಜ) ೮ ಗ (ಜ)

೬೧

ನಿನ್ನಡಿಯರ್ಚನಂ ತವಕಥಾಶ್ರವಣಂ ಭವದೀಯ ದಾಸ್ಯಮುಂ
ಬುನ್ನತ೧[ತಾವರೇಯ]೧ಗುಣವರ್ಣನಮಾವನೊಳೊಪ್ಪುತಿಪ್ಪುದೋ
ಮುನ್ನಿಗನಾ ನರಂ ಸಕಲಮಾನ್ಯನವಂ ಜಗದೈಕವೀರರೊಳ್
ಧನ್ಯಸು ಧನ್ಯಧನ್ಯನವ ಧನ್ಯನಲಾ ಭುವನೈಕನಾಯಕೀ

೬೨

ನೀಂ ಕುಕಳಾಮಯೋ ದೊರೆಯೆಯೆನ್ನೊಳಗೆಂದು ತವಾನನಾಬ್ಜಮುಂ
ಶಂಕಿಸಿ ತಾರಕಾಪತಿ ಕಳಂಕಿಯಹಂ ದ್ವಿಜಭಾವಮೈದಿಸಲ್
ತಾಂ ಕೊಳದಲ್ಲಿ ನಿನ್ನ ಪದಪದ್ಮಗಳಲ್ಲುಡುಪಂಕ್ತಿ ಸೇವಿಸಲ್
ಭೋಂಕವೆನಲ್ಕೆ ತೋ೨ರ್ಪ೨ನಖಜಾಲಗಳೀಂ ಭುವನೈಕನಾಯಕೀ

೬೩

ಶೇಷಕಲಾಪನಾತನುಯಶೇಷಕಲಾಪಳು ನೀನು ತದ್ಗುಣಾ
ನ್ವೇಷಣಮಿಲ್ಲಮೇಂ ಪತಿತನಂ ಪರಿಪಾವನಮಾಡಿದೆಂದು ಸ
ದ್ಭೂಷಣಮಾಗಿ ತೋರಿತು ಸತೀಯೆನೆ ನಿನ್ನೊಳು ಸಾರ್ಥಕಂ ಜಗ
ದ್ಭೇಷಜೆಯಾಗಿ ಕಾಯ್ದೆ ಭವರೋಗಗಳಿಂ ಭುವನೈಕನಾಯಕೀ

೬೪

ಪಮ್ಮಿ ಸುವರ್ಣ ಸದ್ಗುಣ ಸಮಾಹಿತ ನಿಷ್ಕಪಟಾವಲಂಬನಂ
ಸಮ್ಮತ ಮೇಖಲಾವೃತಮದೈಸಲು ಮಧ್ಯದಿ ಶೂನ್ಯವಾದಮುಂ
ಚಿಮ್ಮಿದ ಕಾರಣಕ್ಕೆ ಪಟುಪಂಚಮುಖಪ್ರತಿಮಾನವಿತ್ತು ಮ
ತ್ತುಮ್ಮಿಗದಲ್ಲಿಯಾಸನಕೆ ಮೇಲ್ಗೊ೩ಡು೩ ೪[ನೀಂ]೪ ಭುವನೈಕನಾಯಕೀ

೬೫*

ಚಾಪಲಸತ್ಕರಾರುಣ ಸರೋರುಹ ಸಂಗತ ಕುಂದ ಕಂದುಕಂ
ಗೋಪನಮಾತ್ಮಯೋಜಿತ ಗುಣಕ್ಕನುವಾಗಲು ವರ್ಣಸಾಂಕರಂ
ರೂಪಿಗೆ ಬಂಧ೫ಮೇ೫ ಗುಣಸುಧರ್ಮಸಮಾಶ್ರಿತಮೈಸಿ ವಾಸನ
ಕ್ಕೊಪ್ಪಲು ತೋರಿದೆಮ್ಮ ಸುಮನಃಪದವೀಂ ಭುವನೈಕನಾಯಕೀ

---

೧ ತಾವರೆಯ್ಯ (ಮ), ತಾವರೀಯ (ಜ) ೨ ರ್ವ (ಜ) ೩ ಡಿ (ಮ)
೪ ವೀಂ (ಮೂಲ) ೫ ವೋ ಮ * ಮ ಪ್ರತಿಯಲ್ಲಿ ಇದು ೬೪ನೆಯ ಪದ್ಯವಾಗಿದೆ.

೭೬

ಕನಕವಿಕಾರಮಾದ ಕಟಕಂಯುಡಿಸೋಂಕಲು ವರ್ಣವ್ಯತ್ಯಯಂ
ತನಗಿನಿತಿಲ್ಲಮೆಂದು ರವಕೈತವದಿಂ ನುಡಿಯಲ್ಕೆ ಚಿತ್ರಮಿ
ನ್ನನುನಯಮೊಪ್ಪಿತೆಂದುಯುಪದೇಶವನ್ನೈದುದು ಕೇಳಲಂತು ಪಾ
ವನಕನುಪಾವನಂ ಬೆರಸಿದಂಗವಲಾ ಭುವನೈಕನಾಯಕೀ

೭೭

ಮಾರನನೂನವೀರನಖಿಲಾಂಬಕದಾರನಗಾಧಸಾರವಿ
ಸ್ಫಾರಮಯಪ್ರಪಂಚನು ಮುರಾರಿ ವಿರಿಂಚಿ ಸುರೇಶರಾರ್ಜವಂ
ಮೀರದೆ ರುದ್ರಫಾಲ ನಯನಾನಲದಿಂದ ವಿರೂಪಮಾಗೆ ತ
ನ್ನಾರಿಯ ವಿಶ್ರಮಂಯಿರ್ದೆಯೊಳೊಪ್ಪಿತಲಾ ಭುವನೈಕನಾಯಕೀ

೭೮

ಆರಡಿಯೊಪ್ಪುದಾವರೆಯನರ್ಚಿಸಲಾಕ್ಷಣಮುಕ್ತಕಾಂಚನೋ
ತ್ಸಾರ ವಿರಾಗ ಸತ್ಪಥ ಸದಾಗಮವೃತ್ತಿಗಳಿಂದಮೇಂ ಭವೋ
ತ್ತಾರಕಳೆಂದು ನಿನ್ನನದರಿಂ ಮುನಿಮುಖ್ಯರು ಸೇವಿಸುತ್ತೆ ಸಂ
ಸಾರ ಸಮುದ್ರಮಂ ತುಡುಕಿ ದಾಂಟಿದರೌ ಭುವನೈಕನಾಯಕೀ

೭೯

ತಾಮರಸಂಗಳಂಘ್ರಿಮುಖನೇತ್ರಕರಂಗಳು ಮಿತ್ರಜಾಹೃದೋ
ತ್ಸೀಮೆಯೊಳೊಪ್ಪಿದಂತೆ ಮೆರೆಗುಂ ಭವದಂಗರುಚಿಪ್ರಭಾವದಿಂ
ಶಾಮಲೆ ತದ್ಗುಣಾವಳಿಯ ಮೂಲಗಳಂ ನೆರೆಗಂಡು ಬಣ್ಣಿಸಲ್
ಭೂಮಿಧರಂ ವಿಚಾರಮನುಗೊಂಬುವನೇಂ ಭುವನೈಕನಾಯಕೀ

೮೦

ಅನುಸರಮಾಗಿ ತೋರ್ಪ ತನುವಲ್ಲರಿಯಲ್ಲಿ ಲತಾಂತಗುಚ್ಛಮಂ
ಬಿನಕರಶಾಖೆಯೊಂದಿದುಗುರ್ಗಳ್ವದೀಕ್ಷಣದಿಂದ ದೇಹವಾ
ಸನೆಗೆರಗಿರ್ದ ಷಟ್ಪದಗಳಂತೆ ವಿರಾಜಿಪುವೇನು ನೀಲಪ
ದ್ಮನಯನ ಪಾಂಡುರುಗ್ವಿಜಯ ಭೇಷಜೆ ನೀಂ ಭುವನೈಕನಾಯಕೀ

೭೧

ನೀಲಸರೋರುಹಾಕ್ಷಿ ಭವದೀಯ ಮನೋಜಶರಾಸನಸ್ನಿಭ
ಭ್ರೂಲತೆಯೊಂದಿ ರಾಜಿಸುವ ಪುಷ್ಪಮೆನಲ್ಚೆಲುವಾದ ಮೌಕ್ತಿಕಂ
ನೀಲಿಮವಾಂತು ನಾಶಿಕದೊಳಿರ್ದುದು ಚಿತ್ರವು ಚಂಪಕಕ್ಕೆ ಬಂ
ದೋಲದ ಚಂಚರೀಕಮೆನೆ ತೋರುವುದೇಂ ಭುವನೈಕನಾಯಕೀ

೭೨

ಶುಭ್ರನಖವ್ರಜದ್ವಿಜಸಮೂಹಮನಂತಕಳಾಮಯಾಂಗದಿಂ
ವಿಭ್ರಮವೈದಿ ನಿನ್ನಯ ಮುಗುಳ್ನಗೆ ಬಾಂಬೊಳೆದುಂಬಿ ಸೂಸಲ
ಲ್ಲಭ್ರದ ಮಾರ್ಪೊಳಂಪುಂ ಕರವೊಪ್ಪುತ ಬಲ್ರಜನೀಮುಖೋರ್ಜಿತಂ
ವಿಭ್ರದಮೋಘಮೂರ್ತಿಯನು ಸೇವಿಪುದೇಂ ಭುವನೈಕನಾಯಕೀ

೭೩

ಮದನನನಂಗನಾಗುತಿರಲಂದು ಭವತ್ಕೃಪೆಯೊಂದಿ [1]ನಾರಿಯಂ
ಜದೆಯೊಲವಿಂದಲೀಗ[2] ಪರಿಪಾಲಿಸಲಾವಡೆ ತಾಯಿಗರ್ಭದೊ
ಳ್ಪುದುಗುವೆನೆಂದು ಮೇಣುದರದಿಂ ಪೊರಮಟ್ಟು ಕುಚಾದ್ರಿ ಮಧ್ಯಮೊಂ
ದಿದೊಲಿಪ ರೋಮರಾಜಿ ಚೆಲುವಾದುದಹೋ ಭುವನೈಕನಾಯಕೀ

೭೪

ಪವಿಮಣಿ ಕಿಂಕಿಣೀ ಕಲಿತ ಪಾದಯುಗಂ [3]ಕುಧುಗಾತ್ಮಸಾತ್ವಿಕ
ತ್ವಳವಿಳಶದವೊಂದಿಯುಂ ಚಲಿಸದಂಘ್ರಿಸರೋಜಕೆ ಮುತ್ತಿಕೊಂಡು ಮೇಣ್
ರವಮುಡುಗಿರ್ದ ಬಂಡುಣಿಗಳೆಂದೆನೆ ನೀಲಶರೀರಕಾಂತಿಯಿಂ
ದವಕೆ ವಿವರ್ಣವಿತ್ತ ನವ ಸಾತ್ವಿಕದೊಲ್ ಭುವನೈಕನಾಯಕೀ

೭೫

ಪದ್ಮಪದಂಗಳಿಂ ಮಕರಕುಂಡಲ ಕುಂದರದಂಗಳಿಂ ಮಹಾ
ಸದ್ಮಮುಖಾದಿ ಕಚ್ಛಪಕಪೋಲಗಳಿಂ ವರಶಂಖಕಂಠದಿಂ
ದಿದ್ಮರವುತ್ತೆಗಾತ್ರವು ಮುಕುಂದಸಮಾಹಿತ ನೀಲಕಾಂತಿಯಿಂ
ಸದ್ಮದಲೊಪ್ಪಿತುತ್ತರಸಿಧೀತಮದುಂ ಭುವನೈಕನಾಯಕೀ

---

೧ ಪ (ಮ)   ೨ ನಾರಿಯಂಜಿದೆನೊಲವಿಂದಲೀಗ (ಮ)   ೩ ಕ (ಜ)
೪ ವ (ಮ)

೭೬

ಚಾರುಸುವರ್ಣಕೋಟಿಖಚಿತಾಮಲರತ್ನವಿಶಾಲಕಾಂತಿಕೋ
ಟೀರ ಸಹಸ್ರಭಾನು ನಿಜಕಾಯ ಮಹಾಸಿತ ಪರ್ವತಾಗ್ರಮಂ
ದೇರಿ ಭವಾಂಧಕಾರಗಳನೊತ್ತುತಲಸ್ತತೆಯೊಂದ ನಿನ್ನನುಂ
ಸಾರಿದ ಸತ್ಪಥರ್ಮುಳುಗಲೊಲ್ಲರಲಾ ಭುವನೈಕನಾಯಕೀ

೭೭

ಕೇಸರಿ ವಾಹನಂ ಕುರಿತು ಕುಳ್ಳಿರಲೊಪ್ಪಿ ಕುಚದ್ವಯಂಗಳಿಂ
ದೋಸರಿಸಿರ್ದ ದೇಹಮದು ಕಾಟ್ಯನಗಾಗ್ರದಿ ಕೋಕಯುಗ್ಮಮು
ದ್ಯೈಸಿತಮಾಲಿಸಾಲಮತಿ ಚಲ್ವಿಡಿದಂತೆ ವಿರಾಜಿಕುಂ ಭವ
ದ್ಭಾಸುರಕುಂತಲಭ್ರಮರಜಾಲಮಿರಲ್ ಭುವನೈಕನಾಯಕೀ

೭೮

ನಡುವಪಕಾರದಿಂ ಕಪ[3]ಟಿ[4]ಗಂಬರವೊಂದಲಹಾರಮಿಲ್ಲದೊ
ಪ್ಪಿಡಿಳಗಳನುಕೂಲದಿಂ ಬಡತನಕ್ಕೆಡೆಯಾದುದು ಸದ್ಘನಾಶ್ರಯಿಂ
ದೊಡನೆ ಸುವರ್ಣಭೂಷಣಸುಖಂಪಿಡಿಗೊಪ್ಪಲು ನಾಡೆ ದೊಡ್ಡವರ್
ಗಡ ಮೊರೆವೊಕ್ಕರಲ್ಪರೆನದೊಪ್ಪುವರೌ ಭುವನೈಕನಾಯಕೀ

೭೯

ಮೊದಲು ರತಿಪ್ರಮೋದದಿ ಮುಖಂ ಬಿಡದಗ್ನಿವ[7]ದಾಂ[8]ಶ ಭೂತನೆಂ
ಬುದು ತಿಳಿವಲ[ಕೃಪೀಟ]ಲಗತನಾದಡುಯೆಂದುದರಾಗ್ನಿ ನಾಭಿ ಮಾ
ರ್ಗದಿ ನಿಜ ಬೀಜ [ಮಂ] ಪೊರಗೆ ನೂಕಲದೇ ಪೊಗೆ ಸತ್ಪಯೋಧರಾ
ಸ್ಪದದಲಿ ಸೇರಿತೆಂಬ ಬಡಬಾಸೆಯಲಾ ಭುವನೈಕನಾಯಕೀ

೮೦

ಬಿಡದೆ ಕನಿಷ್ಠಕಾಸ್ಪದಮಿರಲ್ ಕರವೊಂದಿ ಬಹಿಷ್ಕೃತಕ್ಕೆ ಸಂ
ಗಡಿಸಲುರ್ವೊಲ್ಪಡೇಂ ಕರಭಮುತ್ತರಶಾಖೆಯೊಳುಳ್ಳ ಮಾಳ್ಕೆ ನು
ಣ್ಣೊಡೆಗೆ ವಿಶೇಷಮಾಯ್ತು ಶಿವೆ ನಿನ್ನಯ ಲೋಕದಿ ಬಾಳಿಗೊಪ್ಪಿ ಪೆಂ
ಪಿಡಿಯಲು ತತ್ಸಮಾನ ಮಹದಲ್ಪರಿಗೇಂ ಭುವನೈಕನಾಯಕೀ

---

೧ ಮಂದ್ಯೈಸಿ (ಮ) ೨ ಲಿ (ಜ) ೩ ಟ (ಜ) ೪ ದ (ಜ)
೫ ಪ (ಮ) ೬ ವಿ (ಮ) ೭ ದಂ (ಜ) ೮ ಕುಪಟ (ಮ),
೯ ಕಪಟ (ಜ) ೯ ಪೊ (ಮ)

೮೧

ನವನವರತ್ನಪೂರ್ಣಭರಣೇ ಶರಣೇ ಶರಣೇಶಬುದ್ಧಿ ಸಂ
ಭವಭವಭಕ್ತಪಾರ್ಥಶರದೇ ವರದೇ ಸುರದೇವ ಸನ್ನುತೇ
ಶಿವ ಶಿವ ತಾತೆ ಪಾಪಶಮಿತೇ ಸುಮತೇ ನಮಿತೇಷ್ಟದಾತೆ ಶಾಂ
ಭವಿ ಭವಿತವ್ಯಸಾರ ಜಯಗೌರಿ ಶಿವೇ ಭುವನೈಕನಾಯಕೀ

೮೨

ಜಯತು ಪರಾಪರಾಗವರಜಾ ಶರಜಾ ವರಜಾನುವೋಕಾ
ಜಯತು ವಿಶೇಷದೈತ್ಯ ತುಮುಲಾ ವಿಮಲಾ ಕಮಲಾ ವರಪ್ರದಾ
ಜಯತು ಮಹೇಶಚಿತ್ತಭರಿತಾ ದುರಿತಾವರಿತಾತ್ಮಪಾವನಾ
ಜಯತು ಶಿವಾಂಗನಾಯೆನುಂ[ತ]ಂಸಾರಿದೆನೌ ಭುವನೈಕನಾಯಕೀ

೮೩

ಶಂಕರಮೂರ್ತಿ ನಿನ್ನೊಳಗೆ ಶಂಕರನೊಳ್ಭವದೀಯ ಮೂರ್ತಿ ಬೀ
ಜಾಂಕುರ ಭಾವಮೈದಿ ಕಡು ನಿಮ್ಮೊಳಗಾವನಯೋಗವೊಂದಿಪಾ
ಬಿಂಕವ ಪೊಯ್ಯಲಾ ನುಡಿಯನಾಲಿಸಬಾರದೆನಲ್ಕೆ ವಜ್ರತಾ
ಟಂಕವ ಶೋಭಿಸಿತ್ತುಮಮ ಕರ್ಣದೊಳುಂ ಭುವನೈಕನಾಯಕೀ

೮೪

ನವನವ ವೃತ್ತಯುಂಗಳಿನಗೊಂದೆ ನಿವಾಸಕೆ ಮಾಟವೆನ್ನಲೊ
ಪ್ಪುವ ಶ್ರುತಿಬಾಹ್ಯಭಾವಮನುಗೊಳ್ಳದೆ ನೀಂದವೊಲುತ್ಪಲಾವತಂ
ಸವು ನೆರೆ ಚೆಲ್ವಿನಿಂ ಚಲಿಸದಲ್ಲಿ ಮನಂಗೊಳಲಾಯ್ತು ಚಿತ್ರಮೇ
ಭುವನದಿ ಬಂಧಿದುಃಪೀಡಕರನಟ್ಟಿರಲಾ ಭುವನೈಕನಾಯಕೀ

೮೫

ಬೆರಸಿದ ದುಷ್ಟವರ್ಣಗ ೧ ಶಂಖದೊಳಿಲ್ಲ ಪರಂತು ಬೊಮ್ಮ ತಾಂ
ಬರೆದಿಹನೆಂಬ ಸಂಶಯವು ಮಾಣ್ಬೊಡೆ ಪೂಸಿದೊಲಿಪ್ಪ ಕುಂಕುಮಂ
ಸುರುಚಿರಮೈದೆ ಫಾಲಫಲಕಾಶ್ರಿತಮಾಗಿ ವಿಭೂತಿರೇಖೆ ನೀಂ
ಸ್ಮರಿಸಿದವರ್ಗೆ ತೋರ್ಪುದುಳಿದವರ್ಗನುವೇಂ ಭುವನೈಕನಾಯಕೀ

---

೧ ತಿ (ಮೂ೦) ೨ ಧಃ (ಮ)

೮೬

ಕಾಂಚನ ನಾಳಿಕಂ ಮೊಗದೊಳಾ ಮೊಗಮಂಬುಜಮಂಬುಜಕ್ಕೆ ಬಲ್
ಪ್ರೊಂಚಿಲಿ ಸಾರ್ದವಾರಡಿಗಳಾರಡಿಗಳ್ವಕುಂತಲಂಗಳಿಂ
ಸುಂಚಲಿಸುತ್ತಲೊಪ್ಪಿ ಪಣೆಯುಂ ಪಣೆಯಲ್ಲಿ ಚೆಲ್ವಿನಿಂ
ದಂಚಿತವಾಗಿ ತೋರಿದಿ ಲಲಾಮವು ನೀಂ ಭುವನೈಕನಾಯಕೀ

೮೭

ಆಂಚಲಪಂದಂಗದಲ್ಲಿ ಬಸುರೇ ಬಲುಜೀವನರಾಶಿ ಭಕ್ತ ಸ
ನ್ನಿಚಯಮನಾಂತ ದೊಡ್ಡ ಸರಮಲ್ಲಿಹುದೇಂ ಸುಳಿಯಲ್ಲದಬ್ಜಮೋ
ಖಚಿತವು ನಾಭಿಯೆಸಪಘನಾಶ್ರಯಮೊಪ್ಪಲು ಚಿತ್ರಮೇನು ಮೇ
ಣುಂಚಿತವೆ ನಿನ್ನ ಮೂರ್ತಿಯನು ಬಣ್ಣಿಪರಾರ್ ಭುವನೈಕನಾಯಕೀ

೮೮

ಅಂಗಸಮುದ್ರದಲ್ಲಿಡಗಿ ತೇಲುವ ಶೈಲಗಳೇನೊ ಪದ್ಮಕೋ
ಶಂಗಳೊ ತಪ್ತವಾಮೃತಕಲಶಂಗಳೋ ನವಶುಕ್ತಿಭಾಸ್ವದು
ತ್ತುಂಗಸಮುದ್ಗಕಂಗಳೊ ವಿಹಾರಬೃಹತ್ತನುಗುಪ್ತಕುಂಭಿಕುಂ
ಭಂಗಳೊ ಬಲ್ಲರಾರ್ ಕುಚಯುಗಂಗಳವೋ ಭುವನೈಕನಾಯಕೀ

೮೯

ಪಾವನಗೇಹದೇಹಮದು ನೀಲಸಮಾಶ್ರಿತಮಂಗಸೋಪ ಸಂ
ಭಾವನಮಾಗದೇನಚಲಜಾಸ್ಪದಮಾಗಿಹ ರಾಮರಾಜ್ಯದೊಳ್
ಕೇವಲಮಾಗಲುಂ ಮುಚಿತರಾಜಿತಮೌಕ್ತಿಕಮುಷ್ಟಿಯಲ್ಲಿ ಸು
ಗ್ರೀವಸಮರ್ಪಣಂ ತೊಡುವುದಚ್ಚರಿಯೇಂ ಭುವನೈಕನಾಯಕೀ

೯೦

ಭುವಿಯಣುವಾಗಿ ಪೊತ್ತನವನಾವನವಂಗುಣಮಾದನಾವನಿಂ
ಗವನಣುವಾಗಿ ನಿನ್ನಹೃದಯಾಂಬುಜದಲ್ಲಿಹನಾದಮಂತದುಂ
ವಿವರಿಸಲೇಕದೇಶಮನಲೊಪ್ಪಿದ ವಿಗ್ರಹನಾರು ಬಣ್ಣಿಪರ್
ಶಿವಶಿವ ನಾಡೆ ವಾಙ್ಮನಸಗೋಚರವೌ ಭುವನೈಕನಾಯಕೀ

---

೧ ಮಾ (ಮು)

೯೧

ಮನವತಿ ಸೂಕ್ಷ್ಮವಲ್ಲಿರಲು ನೀಂ ಕಡು ಸೂಕ್ಷ್ಮಳು ನಿನ್ನೊಳೊಪ್ಪಿತೆಂ
ದೆನಲು ಪ್ರಪಂಚವೆಂತು ಬಲು ಸೂಕ್ಷ್ಮವು ತಸ್ಥಶಿವಾತ್ಮವೃತ್ತಿ ಸಾ
ಧನದರುವೆಂಬ ಸಂವಿದದು ಸೂಕ್ಷ್ಮಕೆ ಸೂಕ್ಷ್ಮವು ಕೇಳಿ ಕಂಡು ಪೇ
ಳ್ವನೆ ನಿಜಸೂಕ್ಷ್ಮಸಮ್ಮ ಭವದೀಯನವಂ ಭುವನೈಕನಾಯಕೀ

೯೨

ಕ್ಷಿತಿಯನುವಾಲವಾಲದಲಿ ಸ್ವರ್ಧವಾಂವಿನ್ನಯದಿವ್ಯಮೂರ್ತಿ ರಾ
ಜಿತಸಿತಕಾಂತಮಾರ್ದವ ಕರೋರುಹ ಕೌಸುಮಗುಚ್ಛ ದೀಪ್ತ ಸಂ
ಗತ ನವದೋರ್ಲತಾಪರಿಘಜಾಲಮನಲ್ಪಳಿಸಾರ್ದ ಮಾತ್ರಿಕೋ
ದ್ಧತಕರಚಾಮರಂಗಳಿಡಿದೊಪ್ಪಿತಲಾ ಭುವನೈಕನಾಯಕೀ

೯೩

ಬಲ್ಸೊರವಾರಗಳ್ ಘನತೆ ಸೈಬಿಡದಂಬರವ್ಯೈಸಿ ದೃಷ್ಟಿಯಿಂ
ಕಲ್ಪನಮೆಂದು ಮುಂದುಳಿದು ಬೈಲಿಗೆ ಬಾರದ ಲೀಡುವಪ್ಪುದಿಂ
ದಲ್ಪತನಕ್ಕೆ ಬೀಗಲಚಲೋಪಮ ನಿನ್ನನು ಸಾರ್ದವರ್ಗೆಯಿ
ನ್ನಲ್ಪರ ಸಾಧನಂ ಪಿರಿದು ಕಾಣುವುದೌ ಭುವನೈಕನಾಯಕೀ

೯೪

ಮೆರೆವ ಕಟಿಪ್ರದೇಶವು ರಸೋಪಶಿಮುಶಿವೇ ವಿಪರೀತ ಸಾರಮೆಂ
ಬರು ಗಿರಿಸಾಮ್ಯಮೇನು ಗಡಿಸೇರಲು ಮೇಣ್ತಲೆಕಟ್ಟು ಕಾಣದಿಂ
ದಿರಲಚಲಾತ್ಮಜಾತೆಯನು ಪೊಂದಿದಡೇಂಬಗೆದೂಷಣಕ್ಕೆ ಮುಂ
ದರಸದೆ ಪಿಮ್ಮೊಗಂಗೊಳಲು ಪೆರ್ಚುಗೆಯೌ ಭುವನೈಕನಾಯಕೀ

೯೫

ಅರುಣವಿಲಾಸಮೈದು ಸಿತಸಳದ್ವಿಳಜಕಾಂತಿಯಸಹ್ಯಮಿಲ್ಲದಿಂ
ದಿರುವಡೆ ಸೋಮಸಾರಕನುವಾಗಿರೆ ಚಿತ್ರಮೆ ನಾತಿರಾಗಿಯಾ
ದರು ಬಿಡದಿಪ್ಪ ಹಂಸಗತಿಯಿಂ ಕಡುಮಾನ್ಯರು ರಾಜರಾಜ ಭಾ
ರ್ಯರ ನೆರೆಗೊಂಬುದೇನಧರಲೀಲೆಯಲಾ ಭುವನೈಕನಾಯಕೀ

---

೧ ನಿ (ಜ)   ೨ ತ್ರ (ಜ)   ೩ ಮ (ಮ)   ೪ ತ್ಸಿ (ಮ)

೯೭

ಪಿಂತೆ ಮಹಾಪ್ರಳಿಂದ ಮೃಗಯಾಮಲಲೀಲೆಯನಾಂತು ಕೃಷ್ಣ ಸಾ
ರಂ ತುರುಂಕಲ್ಕೆ ಸೋತು ಪ್ರಲುಗಚ್ಚಲೆತಾಯೆ ತವಾಕ್ಷಿಸಾಮ್ಯಮಾ
ಮಾಂತೆನೆ ತಪ್ಪು ಕಬ್ಬಿಗರದೆಂಬುತ ಪಿಮ್ಮೊಗವಾಗಿ ತಾಂ ಪದಾ
ಕ್ರಾಂತತೆಯೊಂದಿದೊಲ್ಮಡದಿ ಗುಲ್ಭವಲಾ ಭುವನೈಕನಾಯಕೀ

೯೭

ಶ್ರೀನಿಧಿ ನಿನ್ನ ಮೈಸಿರಿಗೆ ಪೋಲುವರಾರ್ಭುವನೈಕಸುಂದರೀ
ನೀನೆನೆ ಪುಷ್ಪವಿಲ್ಲ ತನ ಜೊಕ್ಕಸಮುಂದು ಪದಾಗ್ರಕೊಪ್ಪಿಸಲ್
ಮಾನಿ ಸಮಸ್ತಲೋಕದಲಿ ಜೆಲ್ವಿನ ಬಲ್ಗಡಲೆಂಬುದಾಯಿತೌ
ಜಾನುವೆನಲ್ಕಲಾ ಶರಧಿ ಸೌಮ್ಯಮದೌ ಭುವನೈಕನಾಯಕೀ

೯೮

ಆನನಮಬ್ಜಮನ್ನಲು ಷಡಂಘ್ರಿಗಣಕ್ಕುಪವಾಸ ಕಾಂಚನ
ಶ್ರೀನಿಹಿತತ್ವಗಳ್ ಸಲುವ ವೈರಮೆ ನಾರಿಯರಲ್ಲಿ ಸೋತೆನಿ
ನ್ನಾನೆನುತಂಗಜಂ ನಿಜಶರಾಸನಮಂ ನಡುವಿಟ್ಟನೆಂದೆನ
ಲ್ಕಾ ನಿಡುಪುರ್ಬುಗಳ್ ನಿಟಿಲವೊಪ್ಪಿದುವೇಂ ಭುವನೈಕನಾಯಕೀ

೯೯

ಸ್ನೇಹ ಸಮೃದ್ಧಿ ಬೀಜಮದರಿಂ ಬಗೆಗೊಂಬುವುದುತ್ತರೋತ್ತರಂ
ಗೇಹಮಿದೇಯೆನುತ್ತಲನುವಾಗಲು ಸಾಂಬನು ನೋಡಿನೋಡಿ ಮೇ
ಣೂಹಿಸಲೊಪ್ಪಿತೆಂದು ತಿಲಪುಷ್ಪಮೆನಲ್೨[ಚೆ]೨ಲುವಾಂತು ನಾಶಿಕಂ
ಶ್ರೀಹಿಮಶೈಲಜೇ ಮೆರೆವುದಾನನದೊಳ್ ಭುವನೈಕನಾಯಕೀ

೧೦೦

ಉತ್ತರಶೈಲಭೂನಿಕಟಮಾಂತು ವಿರಾಜಿಪುದಂಗದೇಶಮಂ
ಪತ್ತಿಹ ರಾಜಮಂಡಲ ಸದಾಶ್ರಿತಮೊಪ್ಪಿದ ಸದ್ವಿಜಾಳಿಗಿ
ನ್ನಿತ್ತಣಯಾಚನಂ ತತಮರುನ್ನಿಹಿತಾಮಲ ಕಾಂಚನಾಕರಂ
ಮತ್ತಿರೆ ಕುಂದದಂತೆ ಬಹುಚಿತ್ರಮದೇಂ ಭುವನೈಕನಾಯಕೀ

---

೧ ಡ (ವು)   ೨ ಬ (ಮೂಲ)

॥ ಶ್ರೀಗುರುಬಸವಲಿಂಗಾಯನಮಃ ॥

೧

ಶ್ರೀಮದ್ಭೂಜಲವಹ್ನಿವಾಯುರವಿಸೋಮದ್ವ್ಯಾತ್ಮಮೂರ್ತ್ಯಷ್ಟಕಂ
ಸೇಮಂಗೊಂಡಿರೆ ನಿನ್ನ ಬಿಟ್ಟು ನಿರುಪಾಧಿಬ್ರಹ್ಮಚೈತನ್ಯನೆಂ
ಬೀಮರ್ಮಂ ಪಿಡಿದೇಕಮಾಗಿ ಘನವೈರಾಟಕ್ರಮಂಬೆತ್ತು ಚಿ
ದ್ಧಾಮಂ ನೀನೆ ಸಮಗ್ರ ಮೂಲನಹುದೈ ಪಂಪಾಪುರಾಧೀಶ್ವರಾ

೨

ಸಕಲಾಮ್ನಾಯಗಳಶ್ವಮಾಗಲಗಮೇಂ ಕೋದಂಡಮೇಂ ಬಲ್ಮುರಾಂ
ತಕನಾಗಲ್ನಿಸಿತಾಸ್ತ್ರವಿಂದುರವಿಗಳ್ಚಕ್ರಂಗಳೇಂ ದೇವತಾ
ನಿಕರಂ ಪೆರ್ಚಿನ ಬಂಟರೂರ್ವಿರಥಮೇಂ ಕಾದೇನನೇಂ ನೇಣು ತ್ರ್ಯಂ
ಬಕನಿನ್ನುಚ್ಚ ಪರಾಕ್ರಮಕ್ಕೆ ಪಡಿಯಾರ್ಪಂಪಾಪುರಾಧೀಶ್ವರಾ

೩

ಎಂದೆಂದಿಲ್ಲವಿದೆಂಬನೊರ್ವನು ಚಿಕೀರ್ಷಾವಶ್ಯದಿಂದಾಗಿದಿ
ರ್ಬಂದೊಂದೊಂದು ವಿಚಿತ್ರಮಾಗಿ ಕನಸೆನ್ನಲ್ತೋರ್ಪುದೆಂದಂ ಪೆರಂ
ಸಂದೇಹಾಸ್ಪದಮಿಂಬುಗೊಂಡಿತು ಜಗದ್ವೈಲಕ್ಷಣಂ ಕಾಂಬುದೀ
ಸಂದೇಹಾಸ್ಪದರಿಂಗೆ ನಿನ್ನ ಮರೆಯಿಂ ಪಂಪಾಪುರಾಧೀಶ್ವರಾ

೪

ದುರಿತಂಗಳ್ನಿರೆ ಬಾಧಿಸುತ್ತಲಿರೆ ನಿನ್ನಂ ಸಾರ್ದು ಕೈವಾರಿಸಲ್
ನೆರೆದೆನ್ನಂ ಪರಿಪಾಲಿಪಲ್ಲಿ ಮರೆಯಲ್ಮತ್ತಾರು ಕಾಯ್ವಾರ್ತರರ್
ಧರೆಮುನ್ನಾಗಿಸಿ ಮಿಕ್ಕಲೋಕದವರೊಳ್ಕೇಳಾರ್ತರಕ್ಷಾಮಣೀ
ಶರಣಾಗಿಂದುಕಲಾವತಂಸ ಗುರುವೇ ಪಂಪಾಪುರಾಧೀಶ್ವರಾ

೫

ಘನಸರ್ವಜ್ಞತೆಯಲ್ಲಿ ನಿಸ್ತುಲಮಹದ್ಗಾಂಭೀರ್ಯದೊಳ್ನಿತ್ಯವ
ರ್ತನಕಾರುಣ್ಯವಿಚಾರದಲ್ಲಿ ವಿಲಸತ್ತತ್ವಾಭಿಮಾನತ್ವದೊಳ್
ಜನುಮಂ ಪುಟ್ಟಿಸಿ ಪಾಲಿಪಲ್ಲಿ ಪರಮಾರಾಧ್ಯತ್ವದೊಳ್ ಲೋಕಪಾ
ವನ ನೀನಲ್ಲದೆ ಬೇರೆ ದೇವರೊಳರೇ ಪಂಪಾಪುರಾಧೀಶ್ವರಾ

೬

ರಸವಾದಂಗಳು ಬಲ್ಲಡೇನು ನಯದಿಂ ರಾಜ್ಯಾವನಂ ಮಾಡಿ ಮಾ
ನಿಸರೊಳ್ದೊಡ್ಡವನಾದಡೇನು ಮತಿಯಿಂ ನಿರ್ಮೋಹಿಯಾಗಿದ್ದು ಪೊಂ
ಬಸುರಂಗಾದಡು ನೀಂ ಸಹಾಯಮಿರಲಿಲ್ಲೆನ್ನಲ್ಕವೇಂ ಮೇಲು ಸಾ
ಧಿಸಬೇಕಯ್ಯ ಭವತ್ಪ್ರಸಾದದನುವಂ ಪಂಪಾಪುರಾಧೀಶ್ವರಾ

೭

ಶಿವಸರ್ವಾತ್ಮ ಮಹಾನುಭಾವ ಗಿರಿಜಾಪ್ರಾಣೇಶ ನೀರೇಜಸಂ
ಭವಪೂಜಾಂಘ್ರಿಸರೋಜಯುಗ್ಮನಗರಾಟ್ಕೋದಂಡ ಮೃತ್ಯುಂಜಯಾ
ರವಿಚಂದ್ರಾನಲನೇತ್ರ ಬಾಲನವನೀಲಾಬ್ಜಾಪ್ತಚೂಡಾಮಣೀ
ಭವದಿಂ ದಾಟಿಸಿ ಕಾಯ್ವುದೆನ್ನ ಗುರುವೇ ಪಂಪಾಪ್ರರಾಧೀಶ್ವರಾ

೮

ಅಮರರ್ದಾನವರಬ್ಧಿಯನ್ನು ನೆರೆ ಪೀಯೂಷಾರ್ಥದಿಂ ಮಂಥನಂ
ಕಮಲಾಭರ್ತ ವಿರಿಂಚಿಮುಖ್ಯರೊಲವಿಂದಾಗಳ್ಗೆಗಳ್ಪುತ್ತಿರಲ್
ಶಮಿಸಲ್ಬಾರದ ಗಾಢ ಘೋರವಿಷವಲ್ಲಿಂ ಪುಟ್ಟಿ ಲೋಕಂಗಳೆ
೧[ಲ್ಲಮ]೧ನುಂಬುತ್ತಿರಲಂದು ಕಾಯ್ದೆ ಜಗಮಂ ಪಂಪಾಪುರಾಧೀಶ್ವರಾ

೯

ಶ್ರೀಮತ್ಕಾಮಿತ ಸಿದ್ಧಿಗಾಗಿ ಮಿಗೆಯಾರೋಗ್ಯ ಪ್ರಮೋದಕ್ಕೆ ಬಲ್
ಹೇಮಾದ್ಯುನ್ನತ ಧಾನ್ಯ ಸಂಪದಗಳಂ ಕೈಸಾರಲಾವಾಗಲುಂ
ಶ್ರೀಮೃತ್ಯುಂಜಯ ಸಿಂಧುತೂಣ ಶಿವಸರ್ವೋತ್ಕೃಷ್ಟನೆಂದೆಂಬಯೀ
ನಾಮೋಚ್ಚಾರಣ ಬೀಜಮೆಂಬುದಹುದೈ ಪಂಪಾಪುರಾಧೀಶ್ವರಾ

೧೦

ಶಿವನೇ ಕಾರಣವಸ್ತುವೆಂದು ತಿಳಿಯಲ್ಚಿದ್ರಾಜ್ಯಪಟ್ಟಾಭಿಷೇ
ಕವು ಕೈಸಾರುವುದೇಕಮಾಗಿ ಬಹುಧಾ ಧಾರಿದ್ರ್ಯಗಳ್ಭೀತಿಯೆಂ
ಬುವುದೊಂದೆಳ್ಳಿನಿತಾಗದೆಂದು ನಿಗಮಂಗಳ್ನಿಂದು ಕೈವಾರಿಸಲ್
ಭವದೀಯಾಖಿಲ ವೈಭವಕ್ಕೆ ಪಡಿಯಾರ್ಪಂಪಾಪುರಾಧೀಶ್ವರಾ

---

೧ ಲ್ಲಿದು (ಮೂಲ)

೧೧

ಘನರೋಗಾಚಲವಜ್ರಖಡ್ಗ ಪಟು ಚಿಂತಾರಣ್ಯದಾವಾನಲಾ
ತನುದೋಷಾಂಬುಜಕೈರವಾಪ್ತ ಭವಮಾತಂಗಾಳಿಕಂಠೀರವಾ
ಜನಪದ್ವೇಷನಿವಾರಣೈಕ ಪರಮಶ್ರೇಯಪ್ರದಾ ಕಷ್ಟ ಬಂ
ಧನಕಾಕೋದರವೈನತೇಯ ಪೊರೆಯೈ ಪಂಪಾಪುರಾಧೀಶ್ವರಾ

೧೨

ಮುನ್ನೀಕಂಟಕಬಾಧೆಯನ್ನು ಬಿಡಿಸಾರೋಗ್ಯಪ್ರದಾನತ್ವದಿಂ
ದೆನ್ನಂ ಪಾಲಿಸು ನಿತ್ಯತೃಪ್ತಮಿಗೆ ನಿನ್ನಂ ಪೊಂದಿ ಕೊಂಡಾಡುತಂ
ಚೆನ್ನಾಗೀಗಳೆ ಪೋಷಿಸಿಂಪೆ ಕರುಣಾವಾರಾನಿಧೀ ವೇಗದಿಂ
ದಿನ್ನುಂ ಕೈಪಿಡಿದೆತ್ತಿ ಕಾಯ್ವುದನಘಾ ಪಂಪಾಪುರಾಧೀಶ್ವರಾ

೧೩

ನಾನಾ ಕಂಟಕ ಮೋಸವನ್ನು[೧][ಬಿ]ಡಿಸುತ್ತುಂ ಕಾಯ್ವುದೆನ್ನಿಂದ ಮೇಣ್
ಭೂನಾಥಾಧಿಕ ಲೋಕವಂಚನಗಳಾರಾಟಂ ಮೊಗಂದೋರದೊಲ್
ನೀನೇ ಮಾಳ್ಪುದು ನೇಮದಿಂದ ಸೆರೆ ತನ್ನಂ ಪಾಲಿಸಾನಂದ ಸಂ
ಧಾನಂಗೈವುದು ದೀನನೆಂದು ಕೃಪೆಯಿಂ ಪಂಪಾಪುರಾಧೀಶ್ವರಾ

೧೪

ದಯದಿಂ ನೀಡು ಕರಾವಲಂನವು ಶಂಭೋ ಭಕ್ತಪಾಪಾಪನೋ
ದಯ ಸರ್ವಾಧಿಕ ಸರ್ವಕರ್ತೃ ಮೃಡ ಮಾರ್ಕಂಡೇಯ ಮೃತ್ಯುಂಜಯಾ
ರಯದಿಂದೆನ್ನನು ಪಾಲಿಸೆಂದು ಮರೆಯೊಕ್ಕಿಂದುಂ ಶರಣ್ಬೊಕ್ಕೆ ದು
ರ್ಭಯದೂರೀಕೃತ ಸಾಂಬ ಶಂಕರ ಮ[೨][ಹ]ತ್ಪಂಪಾಪುರಾಧೀಶ್ವರಾ

೧೫

ಸಚ್ಚಿತ್ಕಾರಣ ಸತ್ವಮೂರ್ತಿ ಶರಣಾಗೆನ್ನೊಳ್ಕೃಪಾಸಿಂಧು ಭೂ
ಭೃಚ್ಚಾಪಾರ್ತಜನಪ್ರಪಾಲ ಕವಿಯದ್ಗಂಗಾಧರಾ ಮೌನಿ ಭಾ
ಸ್ವಚ್ಚಾಮೀಕರಗರ್ಭವಂದ್ಯ ವರ ನೀಲಗ್ರೀವ ಕಾಮಾಂತಕಾ
ನಿಚ್ಚಂ ನಿನ್ನ ಸಪರ್ಯವೀವುದನಘಾ ಪಂಪಾಪುರಾಧೀಶ್ವರಾ

---

೧ ಬ (ಮೂಲ)  ೨ ಹಾ (ಮೂಲ)

೧೬

ಕಣಕಾಲ್ಮುಟ್ಟುವ ದಟ್ಟಿ ಪೆರ್ಬುಲಿದೊಗಲ್ಮೆಯ್ರಾಗದ ಬಲ್ ಪಿರ್ರೆಜ
ಲ್ಲಣಂ ಜಂಗಾಪಿಯು ಮೇಲುಪ್ರೊರ್ದಿ ೧[ಕೇ]೧ಸರಂಗಳ್ ಪಳ್ಳಿಗುಣ್ಪಿನ್ನು ಮೇ
ಲಣ ಪೂಗೊಂಡೆ ಕುಲಾಯದೊಪ್ಪು ಸೊಗಸಾಗಲ್ಕಿನ್ನ ಕೈರಾತ ಲ
ಕ್ಷಣಮಂ ಬಣ್ಣಿಸೆ ಜೊಮ್ಮಗಾಡೆನುಪರ್ಪಂಪಾಪುರಾಧೀಶ್ವರಾ

೧೭

ತನುಮಂ ತಾಳಿದ ಮೂಲದಿಂದ ಶಿವ ನಿನ್ನಂ ಪೂರ್ವದೊಳ್ಜನ್ಮದಿಂ
ದಿನಿತುಂ ಸೇವಿಸಲಿಲ್ಲವೀಗಲಿಪದೊಳ್ನೀನೇ ಜಗತ್ಕರ್ತನೆಂ
ದೆನುತಂ ಸನ್ನುತಿಗೈದೆನಾಗಿ ಜನನಂ ಮುಂತಿಲ್ಲವಾಗಲ್ಸಮ
ರ್ಜನಮಂತೀಯಪರಾಧದಿಂದಲುಳಿಸೈ ಪಂಪಾಪುರಾಧೀಶ್ವರಾ

೧೮

ವಿವರಂದೋರದು ವೇದಗಳ್ಗೆ ಭವದೀಯಾನಂದ ವಸ್ತು ಪ್ರಮಾ
ಶವು ಲೋಕಾವಳಿಗೆಂತು ಭಾವನ ಪರಾಮರ್ಶಂ ಯಥಾಶಕ್ತಿಯಿಂ
ಶಿವ ನಿಮ್ಮಂ ನುತಿಗೈದು ಧನ್ಯತನ೨[ದಿಂ ಪ್ರತ್ಯಕ್ಷ]೨ ಕೈವಲ್ಯ ಭಾ
ಗ್ಯವು ಸಂಪಾದಿಸಲಂಜಲೇಕೆ ಜಗದೊಳ್ಪಂಪಾಪುರಾಧೀಶ್ವರಾ

೧೯

ಕಂದರ್ಪಧೃತಿಕಾಲಮೇಘಪಟುಜಂಝಾವಾತದುರ್ದಂಡ೩[ಭೃ]೩
ನ್ಮಂದೇಹಾಂಬುಜಮಿತ್ರಮೂರ್ತಿ ಕರಿದೈತ್ಯಧ್ವಂಸಿ ಮೃತ್ಯುಂಜಯಾ
ಇಂದೀ ಕಂಟಕ ಭೀತಿಯನ್ನು ಪರಿಹಾರಂಗೈಯ್ಯಲುಲ್ಲಾಸದಿಂ
ಬಂದೆನ್ನಂ ಪರಿಪಾಲಿಸಯ್ಯ ಕೃಪೆಯಿಂ ಪಂಪಾಪುರಾಧೀಶ್ವರಾ

೨೦

ಮಂದೋಪದ್ರವಶೈಲವಜ್ರ ಗುರುಲತ್ತಾದೋಷಪದ್ಮಾಬ್ಜ ನೀ
ನೆಂದೇ ಕೈಮುಗಿದಾರ್ತನಾದೆ ಶರಣಾಗೆನೊಳ್ ಜಗತ್ಪಾರಿಸೇ
ಷಂ ದೀನಾವನಕೃತ್ಯದಾಟದೊಲವಿಂ ಕಾರುಣ್ಯವಾರಾನಿಧೀ
ಪೊಂದೆನ್ನಂ ಬಿಡಲಾಗದಯ್ಯ ಕರಮಂ ಪಂಪಾಪುರಾಧೀಶ್ವರಾ

---

೧ ಕೆ (ಮೂಲ) ೨ ದಿಂದಪರೋಕ್ಷ (ಮೂಲ) ೩ ಭ್ರೂ (ಮೂಲ)

೨೧

ನರಬಾಣಪ್ರದ ನಿತ್ಯಪೂಜ್ಯ ಪರಮಾನಂದ ಪ್ರಮಾಪೂರ್ಣಸಾ
ಗರ ವಿಶ್ವೇರ ವೀರಭದ್ರ ಮದವತ್ಕಂದರ್ಪವಿಧ್ವಂಸನಾ
ಮರಕಲ್ಯಾಣಕರಪ್ರಸಿದ್ಧ ವಿದಳನ್ಮಾತಂಗದೈತ್ಯಾಚಲೇ
ಶ್ವರಕನ್ಯಾಮಣಿಚಿಂ[ತ್ತ][೧]ಸದ್ಮ ವರದಾ ಪಂಪಾಪುರಾಧೀಶ್ವರಾ

೨೨

ಸಹಿಸಲ್ಬಾರದ ಕಂಟಕಂಗಳಿದಿರಿನ್ನುಂ ತಟ್ಟದೊಲ್ನೆಟ್ಟನೀ
ಮಹಿಯೊಳ್ಪಾಲಿಪುದೆನ್ನ ನೀನು ಕೃಪೆಯಿಂ ಕಾತ್ಯಾಯನೀ ಸನ್ಮನೋ
ಗೃಹ ಸಂವಾಸ ವಿನೋದಮೂರ್ತಿ ನಿಗಮಾಲಂಕಾರ ಚಿತ್ಪೂಜ್ಯ ನಿ
ಸ್ಪೃಹ ಶುದ್ಧಾತ್ಮಕ ಸಿಂಧುತೂಣ ವಿಲಸತ್ಪಂಪಾಪುರಾಧೀಶ್ವರಾ

೨೩

ಅರಸಲ್ದೇವ ಭವತ್ಪದಂಗಳನು ವೇದಂಗಳ್ಪೊಗರ್ಗಣ್ಣಕು
ರ್ಕುರರೂಪಂಗಳ ತಾಳ್ದು ಪೆರ್ಚಿ ಪುಡುಕಲ್ಪದ್ದರ್ಶನಪ್ರಾಪ್ತಿಯಿಂ
ಬರಿದಾಗಲ್ಕಡುನಾಚಿ ಸೋತು ಮಿಗೆ ತೂಷ್ಣೀಂಭಾವಮಂ ಕೈಕೊಳಲ್
ನರರಾರಿನ್ನು ಸುರರ್ಕಳಾರು ಪಡಿಯಲ್ಪಂಪಾಪುರಾಧೀಶ್ವರ

೨೪

ಚಪಲಂ ಚರ್ಚಕನುತ್ಪ್ರಕೋಪಿ ಮಿಗೆ ಸುಳ್ಳಂ ಶಾಠ್ಯನುದ್ದಂಭಕಂ
ಕುಪಿತಂ ಕಾತುರನಪ್ರಮಾಣ ಪರಹಿಂಸಾಮುಖ್ಯ ಪಾಪಂಗಳಿ
ನ್ನುಪಪಾಪಂಗಳನಾರುಬಲ್ಲರಕಟಾ ನಿನ್ನಂ ಶರಣ್ಪೊಕ್ಕೆನೆ
ನ್ನಪರಾಧಂಗಳ ನೋಡದೊಪ್ಪಿ ಸಲಹೈ ಪಂಪಾಪುರಾಧೀಶ್ವರಾ

೨೫

ಪತಿತಾಗ್ರೇಸರನೆನ್ನ ಪಾವನಮೊಡರ್ಚಲ್ಕೀರ್ತಿ ಸರ್ವೋತ್ತಮಾ
ಗತ ನೀನಲ್ಲದೆ ಬೇರೆ ಪೋಷಕರನೆಲ್ಲುಂ ಕಾಣೆ ನಾನಾರ್ತನೆಂ
ದತಿವೇಗಂ ಪಿಡಿದೆತ್ತಿ ಪಾಲಿಸನಘಾ ಶೀತಾಚಲೇಂದ್ರಾತ್ಮಜಾ
ಪತಿ ನಿನ್ನಂ ಪರದೈವನೆಂದೆನಭವಾ ಪಂಪಾಪುರಾಧೀಶ್ವರಾ

---

೧ ತ್ಮ (ಮೂಲ)

೨೬

ನೆರೆ ತೋರಲ್ಕದು ಪೇತುಪಾಗೆ ಕಡುಸುಳ್ಳೆಂಬರ್ಸಮಸ್ತರ್ಜ್ಜಗಂ
ಪಿರಿದಾಭೀತಿಯನಾಂತೆಯಾದ ಬಗೆಯಿಂ ಪ್ರತ್ಯಕ್ಷಮಾಗಲ್ತುಸಾ
ಸರಿದಪ್ಪಾಡುವಿ ಸತ್ಯನೀನು ಸುಗುಣತ್ವಂ ತಾಳಲೇನಾತ್ಮ ನೀ
ಪರಬೊಮ್ಮಂ ಪರಿಪೂರ್ಣಶುದ್ಧನನಘಾ ಪಂಪಾಪುರಾಧೀಶ್ವರಾ

೨೭

ಮಿಗೆಯಾಳೋಜಿ[ಸಿ][೧]ಮುಂದನೋರ್ವಶತನನ್ಯಂ ದುಷ್ಟನಿನ್ನುಂ ಪೆರಂ
ನಿಗಮಾಚಾರವಿಹೀನನೋರ್ವನುರುಯೋಗ್ಯದ್ರೋಹಿ ಮತ್ತೋರ್ವನೀ
ಬಗೆಗಳ್ತಾಳಲು ಬೇರೆಬೇರೆಯಧಿಕಾರಪ್ರಾಪ್ತರೆಂದೊಡ್ಡದೆ
ಲ್ಲಗಳುಂ ಪ್ರೋತ್ತ ಸಮರ್ಥನೆಂದು ಪೊರೆಯಾ ಪಂಪಾಪುರಾಧೀಶ್ವರಾ

೨೮

ಫಣಿಮುಖ್ಯಾಮರಲೋಕಪಾಲಕ ನರೇಶರ್ಗೆಲ್ಲ ನೀನೋರ್ವ ರ
ಕ್ಷಣ ದೀಕ್ಷಾಗುರುವೆನ್ನಲೆನ್ನ ಮರೆಯಲ್ಕಾನಲ್ಲವೇನ್ನೈ ನರಂ
ಗಣಿಸಲ್ಕಾಂ ಪೆರನಲ್ಲ ಮಾನವ ಭವದ್ದೀನಾಥಮಾಗ್ರೆಸರಂ
ಗುಣದಿಂ ಕಾರಣವಲ್ಲವಯ್ಯ ಸಲಹಾ ಪಂಪಾಪುರಾಧೀಶ್ವರಾ

೨೯

ನಾಕಂ ದೈತ್ಯರಿಗಾಗಿ ಸೋತು ಹರಿ ತಾಂ ನಾಳೀಕ ನಾಳಂತರಂ
ಸ್ತೋಕಸ್ಥಾನವೊಳೊಪ್ಪಿನಿಂದ ಕೆಲಕಾಲಂ ಪಿಂತೆಗೈದಿಂತು ನಿ
ನ್ನಾಕಾರಂ ಪರಿಭಾವಿಸಲ್ಲಿ ಯಜಿಸಲ್ಪ್ರತ್ಯಕ್ಷಮಾಗೀಕ್ಷಣಂ
ಬೇಕಾದಿಷ್ಟವನಿತ್ತು ಕಾಯ್ದ ವರದಾ ಪಂಪಾಪುರಾಧೀಶ್ವರಾ

೩೦

ಪತಿತರ್ಪಾವನರಾಗಾವಲ್ಲಿ ಪರಮಶ್ರೀಯಾಭಿಸಮೃದ್ಧಿ ಸಂ
ಗತಿಯಲ್ಲಿಷ್ಟವಿಭೂತಿಯನ್ನು ಪಡೆವಲ್ಲಾತ್ಮಾನುಸಂಧಾನ ಸಂ
ಗತಿಯುಂ ಸಾರ್ವೆಡೆ ಮುಖ್ಯಮಾದುದು ಭವನ್ನಾಮಾಭಿಸಂಕೀರ್ತನಂ
ನುತಿಯಿಂದುನ್ನತಮಾದುದಿಲ್ಲ ಜಗದೊಳ್ಪಂಪಾಪುರಾಧೀಶ್ವರಾ

---

೧ ನೆ (ಮೂಲ)

೩೧

ಬಡವರ್ಬಲ್ಲಿದರಾಗುವಲ್ಲಿ ಬರಡಾದಾವೀದು ಪಾಲನ್ನೆಗಂ
ಕೊಡುವಲ್ಲೀ ಪೊಡವೀಶರೊಪ್ಪಿ ಮಿಗೆ ಸನ್ಮಾನಾದಿ ಧಾನ್ಯಂ ಧನಂ
ಗಡಿಯೂರ್ನಾಡುರು ವೃತ್ತಿ ಭೂಮಿ ಕಡುಮಾನ್ಯಂಗಳ್ಕೊಡಲ್ ಸಿದ್ಧರಾ
ವೆಡೆಯೊಳ್ಕಾರಣ ಮತ್ತೆ ನಿಮ್ಮ ಕೃಪೆಯುಂ ಪಂಪಾಪುರಾಧೀಶ್ವರಾ

೩೨

ಅನಲಂ ನೀರೆನಲಾದುದಂತೆ ಮೃಗರಾಜಂ ಜಿಂಕೆಯಾಗಿರ್ಪುದೆಂ
ದೆನುವರ್ವೈರಿಗಳೆಲ್ಲ ಮಿತ್ರಜನರಾಗಿರ್ಪರ್ಮಹಾಲೋಭಿ ತಾಂ
ಘನದಾತಾರನ ಪೋಲ್ತನಂತೆ ಭವದೀಯಾಂಘ್ರಿಃಕೃಪಾಯೋಗಮೊಂ
ದಿನಿತಾವಂಗನುವಾದಮಾತ್ರಮಿಹದೊಳ್ಪಂಪಾಪುರಾಧೀಶ್ವರಾ

೩೩

ತನುಕೋಶಂ ತನಗಿತ್ತೆಯಾಗಿ ಮಿಗೆ ಪಂಚಪ್ರಾಣಗಳ್ನಾರ್ದವೆ
ನ್ನನು ಸೈಯನ್ನಮಯಪ್ರಪಂಚಕನುಮಿಂದೆನ್ನಂ ರುಚಿಪ್ರಾಯದಿಂ
ಬಿನಲಿತ್ತೆನ್ನನು ಕಾಯ್ದೊಯಾದಡದು ನೀತಿಸ್ಥಾಪನಂ ಲೋಕದೊ
ಳ್ನಿನಗಾರ್ಬಿನ್ನೈಸಲ್ಕೆ ಬಾಧ್ಯರಭವಾ ಪಂಪಾಪುರಾಧೀಶ್ವರಾ

೩೪

ಅತಿ ಸಂಪನ್ನತೆ ನೀತಿ ಭಾವಮಿಡಿದೊಪ್ಪುತ್ತಿಪ್ಪ ಸಚ್ಛಾಸ್ತ್ರ ಸಂ
ತತಿಯುಂ ಸಾಧನ ಸಿದ್ಧಿಯನು ದಯಮಾಡಲ್ನಿನ್ನ ದಾಸರ್ಗೆಯೋ
ಗ್ಯತೆಯುಂಟಾಗಲು ೧[ಕರ್ತ]೧[ನೀನೆ] ಭವದೀಯೌನ್ನತ್ಯಮಂ ಪಾರ್ವತೀ
ಪತಿ ಮತ್ತಾವ ವಿರಿಂಚಿ ಬಲ್ಲ ಬಗೆಯಲ್ಪಂಪಾಪುರಾಧೀಶ್ವರಾ

೩೫

ಕರುಣಾಪಾಂಗದಿ ನೋಡು ನೋಡು ಮನದಿಷ್ಟಂ ನೀಡು ನೀಡೆನ್ನನಾ
ದರದಿಂ ಪೋಷಿಸಿ ಕಷ್ಟನಿಷ್ಠುರಗಳೆಲ್ಲಂ ಪೊಯ್ದು ಚೆಲ್ಲಿನ್ನು ಶಂ
ಕರ ಸರ್ವಜ್ಞ ಮಹಾಮಹೇಶ ಪರಮಾರಾಧ್ಯ ಪ್ರಭೋ ನೀಲಕಂ
ಧರ ಗೋಪಧ್ವಜ ಪಾಲಿಸೆನ್ನನನಿಶಂ ಪಂಪಾಪುರಾಧೀಶ್ವರಾ

---

೧ ಭೂರ್ತ (ಮೂಲ)

೩೬

ಗಿರಿಜಾವಲ್ಲಭ ಗಾನಲೋಲ ಗಣನಾಥಪ್ರೀತ ಗಂಗಾಧರಾ
ಪರಮಾನಂದ ಪವಿತ್ರಮೂರ್ತಿ ಪರಿಪೂರ್ಣಬ್ರಹ್ಮಚೈತನ್ಯ ಸಾ
ಗರಗಂಭೀರ ಪುರಾರಿ ಪೋಷಿಸಭವಾ ಸರ್ಪಾವಳೀಮಾಲಿಕಾ
ಧರಸರ್ವಾಂಗ ಧರಾವರೂಥ ದಯದಿಂ ಪಂಪಾಪುರಾಧೀಶ್ವರಾ

೩೭

ಕರಿಚರ್ಮಾಂಬರ ಕಾಲ ಕಾಲ ಕರುಣಾವಾರಾಸಿಧೀ ಪಾಪಸಿ
ಷ್ಮರನಿರ್ಮೂಲಕ ನಿತ್ಯತೃಪ್ತ ನಿರುಪಾಧಿಸ್ಥಾನ ಬಾಲೇಂದುಶೇ
ಖರ ಕಂದರ್ಪಮದಪ್ರಹಾರ ವಿಭು ವಿದ್ಯಾಧೀಶ ವೀತಾಘ ನೀಂ
ಪರಮಾನುಗ್ರಹದಿಂದಳಿನ್ನ ಪೊರೆಯಾ ಪಂಪಾಪುರಾಧೀಶ್ವರಾ

೩೮

ಶರಣೆಂದಾನತನಪ್ಪೆ ನಿನ್ನ ಚರಣಾಂಭೋಜಾತ ಮಸ್ಮನ್ಮನೋ
ಸರಸಿಸ್ಥಾನದೊಳೊಪ್ಪುಗೈದ ನೆಲೆಯಂ ಕೈಕೊಂಡು ನೀನಿಪ್ಪುದೈ
ಚಿರಚಿನ್ಮಾತ್ರವಿಭಾಸಮಾನ ಶಿವ ಸರ್ವಪ್ರಾಣ ಪಾಕಾ[ರಿ]ಂಮ್ರೈ
ಗ್ಯರಮಾನಾಯಕಮಿತ್ರ ಪಾಲಿಸನಘಾ ಪಂಪಾಪುರಾಧೀಶ್ವರಾ

೩೯

ನರನಾಗಾಮರ ಮುಖ್ಯ ಮೌನಿ ವಿನಮತ್ಪಾದಾಬ್ಜ ವಿಶ್ವೇಶ ನಿ
ರ್ಜರಗಂಗಾ ಘನಸಾರ ಕರ್ಪುರ ಲಸದ್ಗೌ[1]ರ ಪ್ರಭಾಮೂರ್ತಿ ಸುಂ
ದರದರ್ವೀಕರ ಸತ್ಕಲಾಪ ಸದಸದ್ಭಾವೈಕ ಚಿತ್ರಪ್ರಮಾ
ಕರ ಕಂಜಾಸನಪೂಜಿತಾಂಘ್ರಿಯುಗಳಾ ಪಂಪಾಪುರಾಧೀಶ್ವರಾ

೪೦

ಕನಕಾಗೇಂದ್ರವು ಕೈಯೊಳಿನ್ನು ಕರಮೊಪ್ಪುತ್ತಿರ್ದು ಯಕ್ಷೇಶ್ವರಂ
ನಿನಗಾಪ್ತಂ ವಿಲಸದ್ವಿಭೂತಿ ಪದಮಂ ನೀನಾಂತು ನಿತ್ಯತ್ವ ಸಾ
ಧನದಿಂದೆಲ್ಲರಿಗನ್ನವಿತ್ತು ಪೊರೆಯುತ್ತಿರ್ಪಾತ್ಮಜೀವೇಶನೀ
ಜನರೊಳ್ ಭೈಕ್ಷಚರಿತ್ರಮೇಕೆ ವಿಭುವೇ ಪಂಪಾಪುರಾಧೀಶ್ವರಾ

---

೧ ದಿ (ಮೂಲ)

೪೧

ತೃಣಮುಖ್ಯಾಬ್ಜಭವೇಂದ್ರ ಮೌನಿ ವರಸೃಷ್ಟಿಸ್ಥಾಪನಂಗೈದು ತ
ದ್ಗುಣಮಂ ಪೋಷಿಸಿ ಪುಷ್ಟಿಯಿತ್ತು ಸುಖದಿಂ ಕರ್ಮಪ್ರಧಾನತ್ವದಿಂ
ಮಣಿಸುತ್ತೆರ್ಬಿಸುತಾಡಿಸುತ್ತ ಬಗೆಗೊಂಡಿಂತೆಲ್ಲರಂ ನೋಳ್ಪ ಗೊಂ
ದಣಮಂ ಮೇವನೊಡರ್ಚಲಾವ ಶಿವ ನೀಂ ಪಂಪಾಪುರಾಧೀಶ್ವರಾ

೪೨

ಪರಮಪ್ರೀತಿಯೊಳನ್ನಪೂರ್ಣೆ ಭವದರ್ಧಾಂಗಿತ್ವಮಂ ತಾಳ್ದಿರಲ್
ತಿರಿದುಣ್ಣುತ್ತಿಹುದೇಕೆ ನಿನ್ನು ಪರಿ[ಯಿಂ]೧ತಂ ಕರ್ಮಮಿಂಬಾಂತುವೇ
ನ೨[ರಿ]೨ದೀ ಮರ್ಮವನಾರುಬಲ್ಲರು ಶಿವಾ ನೀಂ ಬಲ್ಲೆ ಚಾರಿತ್ರದಿಂ
ದರಸಲ್ ತಕ್ಕ ಮಹಾತ್ಮರುಂಟೆ ಜಗದೊಳ್ಪಂಪಾಪುರಾಧೀಶ್ವರಾ

೪೩

ಗುಡಿಗುಂಡಾರಗಳಲ್ಲಿ ಪೊಳ್ತುಗಳೆವುತ್ತ ಯೋಗಸಂಧಾನಮಂ
ಪಿಡಿದಲ್ಲಾಡದೆ ನಿನ್ನವಸ್ತುಮನದೋಳೇಕತ್ವದಿಂ ಭಾವಿಸಿ
ನ್ನೊಡನಾಡುತ್ತಿಹ ಜೀವನೆಲ್ಲ ಬಗೆಯಿಂ ನೀನಾಗಿ ಭೋಗಕ್ಕೆ ಸೇ
ರ್ಪಡೆಯಾಗಿರ್ಪುದದಾವ ಶಾಸ್ತ್ರದೊಲವೈ ಪಂಪಾಪುರಾಧೀಶ್ವರಾ

೪೪

ಮುಡಿಯೊಳ್ಸೂಡಿದ ಪುಷ್ಪದಂತೆಯುಡುಸಂದೋಹಂ ಬಿದಿರ್ಚುತ್ತಿರಲ್
ಮಿಡಿಪಾವ್ಗಳ್ಜಡೆಯುಂ ಪಳಂಚಿ ಕುಡಿಮಿಂಚಿಂಗುರ್ಬಿಸಂಬೆರ್ಚಲೀ
ಗಡಣಂ ನೋಡಿ ನಡುಂಗೆ ಭೂಮಿ ಪದಘಾತಕ್ಕಿನ್ನು ನಿನ್ನಾಟದೀ
ದಿಡುಗಿಂಗೂದುವರಾರು ಬಾರಿಸುವರಾರ್ಪಂಪಾಪುರಾಧೀಶ್ವರಾ

೪೫

ಶರಣಾದೆಲ್ಲರು ಬಲ್ಲರೀತಿ ಶರಣೆನ್ನಲ್ಕೋರ್ವ ದೀನಾಥಮಂ
ಗುರುವಾಗಿರ್ಪ ಸಮಸ್ತರಿಂಗೆ ಗುರುವೆನ್ನಲ್ಕೋರ್ವ ಭಕ್ತೋತ್ತಮಂ
ದುರಳರ್ಕಾಮಕಲೀತರಲ್ಲಿ ಹರಭಾವಂ ಬಿತ್ತೆ ನೀನೋರ್ವನೀ
ಪರಿ ಲೀಲಾಪರನಾಗಲಾರು ಬಗೆವರ್ಪಂಪಾಪುರಾಧೀಶ್ವರಾ

---

೧ ಯ (ಮೂಲ)    ೨ ಹ (ಮೂಲ)

೪೬

ಮನದೊಳ್ ಚಿಂತಿ[ಸೆ]೧ ನಿನ್ನ ರೂಪಮನಿಶಂ ಭಕ್ತಿಪ್ರದಮಾ ಸಾಧುಸಾ
ಧನಮಂ ನೀಡುವೆ ತತ್ಸ್ವರೂಪದೊಲವಿಸ್ತೂ ಬುದ್ಧಿಯಂ ನೇಮಿಸ
ಲ್ಘನಚಿತ್ಸೌಖ್ಯವನಿತ್ತೆ [ನೀನು] ಶಿವನಾಮಂ ಬಾಯಿಲೊರ್ಮೊರ್ಮೆ ಕೀ
ರ್ತನಮಂ ಮಾಳ್ಪನಿಗಾತ್ಮನಿಷ್ಠೆಯೊಲವೈ ಪಂಪಾಪುರಾಧೀಶ್ವರಾ

೪೭

ಶ್ರೀಮದ್ವಿಶ್ವವಿಭುತ್ವವಿನ್ನು ಮಿಗೆ ಸಾರಲ್ನಿನ್ನನಸ್ಥಿವ್ರಜೋ
ದ್ಧಾವೋನ್ಮಾಲೆಯೊಡರ್ಚಲುಂಟೆ ಗಜಚರ್ಮಂ ಚೇಲಮೇನ್ನೈ ಭವ
ನ್ನಾಮ ಶ್ಲಾಘನಮಾತ್ರಮೊಪ್ಪುತಿಪುದೆಲ್ಲಾ ಶಾಸ್ತ್ರದೊಳೂಪಮೇ
ಸೋ ಮಾಯಾಮಯಮಾರುಬಲ್ಲರಭವಾ ಪಂಪಾಪುರಾಧೀಶ್ವರಾ

೪೮

ಪೊಗಳಲ್ವೇದಗಳೆಲ್ಲ ನಾಣ್ಚಿ ಮಗುಳಿನ್ನುಂ ಬಲ್ಲರಾ[ಕೀ]೨ರ್ತಿಸಲ್
ಬಗೆಗೊಳ್ವಲ್ಲಿಯುಪಾಯಮಲ್ತೆ ಬಿಡವರ್ನಿಚ್ಚಂ ತುಳಿಲ್ಗೈದು ನಾ
ಮಗಳಂ ಬಾಯಿಲಿ ಮೆಲ್ಲನೋದಿದವನೇ ಧನ್ಯಂ ಮಹಾಮುಕ್ತಿಭಾ
ಗಿಗನಾಗಲ್ಮಿಗೆ ಕೀರ್ತನಕ್ಕೆ ಸರಿಯೇಂ ಪಂಪಾಪುರಾಧೀಶ್ವರಾ

೪೯

ನೆರೆಕಲ್ಯಾಣವೊಡರ್ಚುವಲ್ಲಿ ಪತಿತಾರ್ತರ್ಗೆಲ್ಲ ದೀನರ್ಗೆ ಮೇ
ಣ್ನಿರದಾರಿದ್ರಗೆ ಬಾಲಕರ್ಗೆ ಕುರುಡರ್ಕುಂಟರ್ಗೆ ಬಲ್ಲರ್ಗೆ ಬಲ್
ಸಿರಿಯಂ ನೇಮಿಸುವಲ್ಲಿ ನಿನ್ನ ಶಿವನಾಮಪ್ರೇಮಸಂಕೀರ್ತನಂ
ಗುರುವಾಗಿಪ್ಪುದು ಸರ್ವರಿಂಗೆ ಸುಲಭಂ ಪಂಪಾಪುರಾಧೀಶ್ವರಾ

೫೦

ಪುರಕಂದರ್ಪಯಮರ್ಗೆ ಭೀತಿ ಪುರುಹೂತಂಗಿಷ್ಟಸಂಪ್ರೀತಿಯೊಂ
ದಿರೆ ಸರ್ವರ್ಗೆ ಸಮಾನಶೀಲದೊಲವಂ ವೈಷಮ್ಯನೈರ್ಘೃಣ್ಯಕಾ
ಸರಮಾಗುತ್ತಿರೆ ಸರ್ವಸಾಕ್ಷಿವಿಭವಕ್ಕೇನೀ ವಿಚಿತ್ರಂ ಪರಾ
ಪರ ನಿನ್ನಂ ನೆರೆ ನೀನೆ ಬಲ್ಲೆಯಭವಾ ಪಂಪಾಪುರಾಧೀಶ್ವರಾ

---

೧ ಸಿ (ಮೂಲ)    ೨ ಕೀ (ಮೂಲ)

೫೧

ಭುಜಸಾರಕ್ಕೆದುರಿಲ್ಲವಾಗೆ ಶಿವಕೈಲಾಸಾದ್ರಿಯಂ ಕೀಳ್ಪಡಾ
ತ್ರಿಜಗನ್ಮಾತೆಯು ಗೌರಿಯಂಜುತಲಿದೇನೆಂದೋಪನಂ ಕೇಳಲಂ
ದು ಜಗನ್ನಾಯಕ ನೋಡುತಾಗಲಿವ ಪೌಲಸ್ತ್ಯಂ ೧[ಕಣೇ]೧ಯೆಂಬುತಂ
ನಿಜಪಾದಾಂಗುಟದಿಂದಲೊತ್ತಿದಭವಾ ಪಂಪಾಪುರಾಧೀಶ್ವರಾ

೫೨

ದುರಿತಕ್ಕಂಜುತ ನೋತುಬಂದು ಚರಣಂಗಳ್ಗಾ೨[ನತಂ]೨ಗೈದು ಶಂ
ಕರ ನಿನ್ನಂ ಶರಣೆಂದೆನೆನ್ನ ಪೊರೆಯಲ್ಕಾಗೆತ್ತಣುದ್ಯೋಗವೇ
ತರ ಕಾರುಣ್ಯವು ದೀನರಲ್ಲಿ ಕಡುವೇಗಂ ಸಾರಿ ಪೋಷಿಪ್ಪುದೇ
ವರ ಸತ್ಕೀರ್ತಿ ವಿಶಾಲವಾದುದಭವಾ ಪಂಪಾಪುರಾಧೀಶ್ವರಾ

೫೩

ಕರಿರಾಜಾಸ್ಯಷಡಾನನಾದಿಗಣರಾಶಿಪ್ರೇಮ ನೀರೇಜಭಾ
ಸ್ಕರಚಿದ್ಬೀಜ ಶಿವಾಕ್ಷಿಶೈರವವಿಧೂ ಕಾತ್ಯಾಯನೀಚಿತ್ತವಂ
ದಿರ ಜ್ಯೋತಿರ್ಮಯಮೂರ್ತಿ ನಿನ್ನ ಪದಸೇವಾನಂದಸಂಪ್ರೀತಿಯಂ
ಚಿರಕಾಲಂ ದಯಗೈದು ಪಾಲಿಸಭವಾ ಪಂಪಾಪುರಾಧೀಶ್ವರಾ

೫೪

ಇಳೆದೇರ್ತೇರಿನ ಪೊತ್ತನಾರಿಯದು ಮುಂಚಂಗೈದ ಕೋಲ್ಕೊಲಿನೊ
ಕ್ಕುಳದಿಂ ಪುಟ್ಟಿದ ಬೋವಬೋವನ ವಿಧಾನ ಶ್ರೌ೩[ತ]೩ಗಳ್ತೇಜಿಗ
ಳ್ತೊಳಪಾ ತೇಜಿಗಳಪ್ರಮಾಣಮೆನುತಾಚಾರಾ೪[ಧ್ಯ]೪ರಿಂದಿರ್ದ ಮೂ
ರ್ಪೊಳಲಂ ಚುರ್ಚಿ ಪುರಾರಿಯಾಗಿ ಮೆರೆದೈ ಪಂಪಾಪುರಾಧೀಶ್ವರಾ

೫೫

ವೃಷಭೋತ್ತುಂಗತುರಂಗರಂಗದಭಿಸಾರಂಗಾತ್ತಹಸ್ತಾಂಬುಜಾ
ಋಷಿಮುಖ್ಯಾಖಿಲ ಸೇವ್ಯಭಾವ್ಯವಿನಮತ್ತ್ರಯ್ಯಾಮದೀಯ ಪ್ರಭೋ
ಝಷಕೇತ್ವಂಗವಿಭಂಗಭಾಂಗ ಘನಚಿಲ್ಲಿಂಗಾರ್ತ ಚಿಂತಾಮಣೇ
ಸುಷುಮಾಬ್ಜಾಕ್ಷವಿಪಕ್ಷಶಿಕ್ಷಸಲಹೈ ಪಂಪಾಪುರಾಧೀಶ್ವರಾ

---

೧ ಕಣಾ (ಮೂಲ) ೨ ನತಿ (ಮೂಲ)
೩ ತಂ (ಮೂಲ) ೪ ಡ್ಯ (ಮೂಲ)

೫೬

ತಿಳಿಯಲ್ಬಾರದ ವೇದರೂಪವ ಪುಳಿಂದಬ್ರಹ್ಮಸೊಳ್ಕಾದಿ ಕೈ
ಗೊಳುತಂ ಸೋತು ಶಿವಾಯೆನುತ್ತ ಮನದೊಳ್ನಿನ್ನರ್ಜನಂಗೈವುತಂ
ಸೆಳೆಯಲ್ಕರ್ಜುನಮಷ್ಟಮೂರ್ತಿವಿಭವಂ ಪ್ರತ್ಯಕ್ಷದಿಂ ಮೆಚ್ಚಿಯು
ಜ್ವಳಮಂತ್ರಾಸ್ತ್ರಗಳಿತ್ತು ಕಾಯ್ದೆಯಭವಾ ಪಂಪಾಪುರಾಧೀಶ್ವರಾ

೫೭

ಗೊಲ್ಲಾಳಂಗಿದಿರಾಗಿ ತೋರಿದೆ ಭವದ್ರೂಪಂ ಸಮಂ ಲಿಂಗನಂ
ಯೆಲ್ಲಾ ಕಾಲದಿ ಕನ್ನಪಂಗೆ ನಲಿದಿತ್ತೈಸಾಂಖ್ಯತೊಂಡಂಗೆ ಬ
ಲ್ಕಲ್ಲೇಟಿಂಗೊಡಬಟ್ಟು ಶೈವಪುರಮಂ ಸಾರ್ಚಲ್ ಶಿವಾ ನಿನ್ನನುಂ
ಬಲ್ಲಾತಂ ನರರಲ್ಲಿ ರುದ್ರನಹುದೈ ಪಂಪಾಪುರಾಧೀಶ್ವರಾ

೫೮

ಧರೆಯೂಣ್ಮರ್ದಯಗೈಯದಂದು ನೆರೆಯಾಧಿಪ್ರಾಪ್ತಿಯಪ್ಪಂದುಯಾ
ಪ್ತರು ಬಿಟ್ಟಾಡುವ ಕಾಲದಲ್ಲ ಪಣಕಾನುಂ ಬಂದು ಕೈಸೇರುವ
ಕ್ಕರವೊಂದಿಲ್ಲದ ವೇಳೆಯಲ್ಲಿ ಶಿವಂ ನಿನ್ನಂ ನಂಬಿಕೊಂಡಿರ್ಪನಂ
ಮರೆಯಲ್ಕೀರುತಿಯಲ್ಲವೈ[ಸೆ]ಸಲಹಾ ಪಂಪಾಪುರಾಧೀಶ್ವರಾ

೫೯

ಆರೋಗ್ಯಕ್ಕನುಕೂಲನಾಗಿ ನೆರೆ ನೀನೇ ವೈದ್ಯನೆಂದೆನ್ನೊಳುಂ
ಸಾರಾಚಾರ ವಿಶಿಷ್ಟಭಾವ ದೃಢಧರ್ಮಂ ಸದ್ರುಚಿಪ್ರಾಪ್ತಿಯಾ
ಧಾರಕ್ಕೈದಿಸಿ ಕಾಯ್ವುದೀಗವೊದಲೊಂ[ಳ್ಸ]೧ಮಿ[ರ್ಥ್ಯ]೨ಮಥ್ಯಾಸ್ಪದಂ
ತೋರಿನ್ನಾದರು ದೀನಬಂಧು ಕರುಣೀ ಪಂಪಾಪುರಾಧೀಶ್ವರಾ

೬೦

ವಿಧಿ ಮುಂತಾದ ಋಷೀಂದ್ರ ಚಂದ್ರಪುರುಷೋತ್ತರ್ಕಿನ್ನರರ್ಕಾವ್ಯ ಸ
ದ್ಬುಧ ಬೃಂದಾರಕರೊಂದುಗೂಡಿ ಶಿವ ನಿನ್ನೋಲೈಸಿಕೊಂಡಾಡುವಾ
ವಿಧಮಂ ಬಣ್ಣಿಸೆ ಶೇಷಗಾಗದಿರಲಿನ್ನುಂ ಸರ್ವಲೋಕಂಗಳೋ
ಳಧಿಕಾರಸ್ಥರನೆಂತು ಪೇಳ್ವುದಭವಾ ಪಂಪಾಪುರಾಧೀಶ್ವರಾ

---

೧ ಲ್ಸ (ಮೂಲ) ೨ ರ್ಥ (ಮೂಲ)

೬೧

ಜಾತ್ಯಾಚಾರ ಜಯಾಭಿಯೋಗ ವಿಲಸಚ್ಛಾರೂಪಸಿದ್ಧಿಕ್ರಮಾ
ಮಾತ್ಯಪ್ರೇಮ ನರಾಧಿನಾಥ ಕೃಪೆಯೆಂಬೆಭಾಗ್ಯಗಳ್ಪೂರ್ವ ಕೃ
ತ್ಯೈತ್ಯಾಧೀನಗಳೆಂಬರೆಲ್ಲರು ಜಗತ್ಸಿದ್ಧಾಂತದಿಂದಂ ಭವ
ದ್ಭೃತ್ಯಾಸುಜ್ಞತೆಯಾಂತವೆಲ್ಲ ವಿಧಿಗಳ್ಪಂಪಾಪುರಾಧೀಶ್ವರಾ

೬೨

ನೆಲಮೆಲ್ಲರ್ಗಚಲಾನುಭಾವತೆಯದುಂ ತೋರ್ಪುತ್ತೆ ನೀನೊರ್ವ ಬಲ್
ಬಲವದ್ದೇವ ಮಹೇಶನೆಂಬುತ ಶತಾಂಗತ್ವಕ್ಕೆ ಪಕ್ಕಾಗಿ ನಿ
ನ್ನೊಲವಂ ತಾಳ್ದು ವರೂಥಮಾಗಲು ಚಲತ್ವಂ ತನ್ನೊಳಿಪ್ಪರ್ಥಮೊ
ಪ್ಪಲಿಬೇಕೆನ್ನುತ ಬಂಡಿಯಾದುದಭವಾ ಪಂಪಾಪುರಾಧೀಶ್ವರಾ

೬೩

ಮಿಗೆ ಭೂತಾವಳಿ ನಿನ್ನ ಸೇವೆಗೆಯೊಡಂಬಟ್ಟಂದು ವೈಚಿತ್ರಮಾ
ದ ಗುಣಂಗಳ್ಗೆ ಸ್ವತಂತ್ರವೊಪ್ಪದು ಭವತ್ಕಾರ್ಯಾನುಸಾರತ್ವದಿಂ
ಬಗೆಗೊಂಡಿಪ್ಪುದೆ ಶೀಲಮಲ್ಲದೆ ಜಗಜ್ಜಾಲಕ್ಕೆಯೆನ್ನೋಪಭೋ
ಗಗಳುಂಟಾಗೆ ಭವತ್ಸ್ವತಂತ್ರದನುವೈ ಪಂಪಾಪುರಾಧೀಶ್ವರಾ

೬೪

ಜಗದಲ್ಲಾರಿಗು ನಿನ್ನನುಜ್ಞೆಯಲಿ ಬಪ್ಪಾವೇಷಗಳ್ಪೊತ್ತು ರೀ
ತಿಗಳೆಂತಿರ್ದಡು ತಪ್ಪದೊಪ್ಪಿನಡೆಯಲ್ಕಾಸ್ತ್ರಾನುಸಾರಕ್ರಮಂ
ನಿಗಮಂಗಳ್ಗೆ ಮೃಗತ್ವವೊಪ್ಪಲುಯವಶ್ಯಂ ತಳ್ದ ತದ್ರೂಪಗಳ್
ಸೊಗಸಾಗಿಪ್ಪುವೆನುತ್ತ ಬಾಳ್ದವಭವಾ ಪಂಪಾಪುರಾಧೀಶ್ವರಾ

೬೫

ಅಣುವಾಗಿಪ್ಪೆ ಮಹತ್ವವೊಪ್ಪಿರೆ ನಿದಾನತ್ವಕ್ಕೆ ಪಕ್ಕಾಗಿ ಮೇ
ಣ್ಣುಣಕರ್ತೃತ್ವದಿ ರೂಪಿಯಾಗಿ ಭವದಿಚ್ಛಾಶಕ್ತಿಯೋಡಾಟದು
ಬ್ಬಣಕಿಂಬಾದೆ ವಿಚಿತ್ರಮಯ್ಯ ಮಿಗೆ ನಿನ್ನಾಟಕ್ಕೆನೀ ಸೂತ್ರಧಾ
ರಣನಾಗಿರ್ಪುದೆ ಗೌರವತ್ವಮಭವಾ ಪಂಪಾಪುರಾಧೀಶ್ವರಾ

೬೬

ತೊಗೆಯುಂಟಾದಡೆ ತುಪ್ಪಮೆಂಬ ನೆರೆತುಪ್ಪಂ ನೀಡಲೇನೀ ಬರೇ
ಯುಗುಳೆಂತುಂಬುವೆನೆಂದು ಸಾರು ತರವೇಳಲ್ತೆಂದು ನೀಡಲ್ಕೆ ಮ
ಜ್ಜಿಗೆ ಬೇಕೆಂಬುವನುಪ್ಪುಗೂಡಿ ಮನುಜಂಗೇನಿರ್ದರೇನಪ್ಪುದೇ
ಮಿಗೆ ತೃ[ಪ್ತಿ]ತ್ವಕೆ ಸಾಲದೆಂಬನಭವಾ ಪಂಪಾಪುರಾಧೀಶ್ವರಾ

೬೭

ನೆಗೆಯುಲ್ಪಂಗು ಸಮುದ್ರಮಂದು ಮೃಗರಾಜಂ ಕುಂಜರಕ್ಕಂಜಿ ದಿ
ಕ್ಕಿಗೆಯೋಡುತ್ತಿರಲಂದು ಮೂಕನು ಮಹಾ ಶಾಸ್ತ್ರಂಗಳೊಂದುಕ್ತಿಗಳ್
ಬಗೆದಾಡುತ್ತಿರಲಂದು ಲುಬ್ಧನ ಧನಂ ಕೈಗಪ್ಪುದೆಂತೋ ಸದಾ
ರ್ಥಿಗೆ ತದ್ರುಪ್ಯವು ಮೂರು ಭಾಗವಭವಾ ಪಂಪಾಪುರಾಧೀಶ್ವರಾ

೬೮

ಬಡಿಕಂಡಾಡುವನದ್ರಿರಾಶಿಯು ಸಮುದ್ರಂ ನೋಡುತೊಟ್ಟಾರೆಯಿಂ
ಕುಡಿಮಂ ಧಾರುಣಿಯುಂತರಿಕ್ಷವವು ತಾಳಂಗೈವುತಂ ಬಾರಿಸಲ್
ಮೃಡ ನಿನ್ನಂದ ವಿಶೇಷವೆನ್ನಲು ಭವದ್ಭಕ್ತರ್ಗೆ ಸಾಟೀ ಬರೇ
ಬಡಿವಾರಂ ಬಲುದೊಡ್ಡದಾಂತೆಯಭವಾ ಪಂಪಾಪುರಾಧೀಶ್ವರಾ

೬೯

ಕಸೆಯಿಂದೊಪ್ಪುವುದಾಗಿ ದೊಡ್ಡ ಪೊಲಪೊಳ್ಬೀಜಾರ್ಪಣಂಗೈಯೆ ಬ
ಲ್ಸಸಿಯಿಂದೊಪ್ಪಿತು ಸಾಲುಗೊಂಡು ಮನೆಯೊಳ್ಸತ್ಕೀರ್ತಿಯಂ ಬಾಳ್ವಡಾ
ಸೊಸೆಯಿಂದೊಪ್ಪಿತು ನಿನ್ನ ಭಕ್ತಿಯನೊಡರ್ಚಲ್ಬಲ್ಲ ಸದ್ಭಕ್ತನೆ
ಣ್ದೆಸೆಯಿಂದೊಪ್ಪುವನೆಲ್ಲರಲ್ಲಿಯಭವಾ ಪಂಪಾಪುರಾಧೀಶ್ವರಾ

೭೦

ವಿತ್ತಾಧೀಶನು ಸೇವೆಯಲ್ಲಿ ಇರಲಾಪ್ತಾಚಾರದಿಂ ಬಾಳ್ದಡಿ
ನ್ನೆತ್ತೇಸೇರಿದ ತತ್ತುರಂಗಮದು ನಿನ್ನಂ ಸೇರಲೇಂ ದೊಡ್ಡದೈ
ಜತ್ತಾಗುತ್ಕಟ ದೇವವರ್ಗವು ಭಟಾನೀಕತ್ವಮಾಂತೊಪ್ಪಿರಲ್
ಮತ್ತೇಕಯ್ಯ ಪಿಶಾಚಿ ಸೇವೆಯಭವಾ ಪಂಪಾಪುರಾಧೀಶ್ವರಾ

೭೧

ಗುರು ನೀನಾಗಿ ಲಘುತ್ವಮಾಂತೆ ಸೆರೆ ಸರ್ವವ್ಯಾಪ್ತನಾಗೊಂದಕುಂ
ಗುರಿಯಾಗಿಲ್ಲದೆ ಜೇರೆನುತ್ತೆ ಪರಮೂಲಬ್ರಹ್ಮನಾಗೀ ವಸುಂ
ಧರೆಯೊಳ್ ದಕ್ಷಿಣ ಕಾಶಿಯೆಂಬ ಪರಪಂಪಾಕ್ಷೇತ್ರಕ್ಕೈತಂದು ಶಂ
ಕರ ರೂಪಂ ನೆಲೆಗೊಂಡ ನಿನ್ನ ಗುಣಗಳ್ವೇದಕ್ಕ ವಾಚಾಮಗೋ
ಚರಮಾಗುತ್ತಿರೆ ಲೋಗರಾರು ಬಗೆಯಲ್ಪಂಪಾಪುರಾಧೀಶ್ವರಾ

೭೨

ಗಿರಿಜಾರೂಪವ ಕಳ್ತುಕೊಂಡು ನಡುಮುನ್ನೀರ್ಗ್ವಕ್ಕು ಪಾತಾಳ ಮಂ
ದಿರದಲ್ಲಾಸರಗೊಂಡು ನಿಮ್ಮ ಮರವಿಂ ಸೊಕ್ಕಿರ್ದಡಾಗಾ ಜಲಂ
ಧರನಿಂಗಂಗುಲಿ೧[ಯಿಂ]೧ದ ಲೇಖಿಸಿದ ಚಕ್ರಂದೋರಿ ತತ್ಕಂಧರಂ
ಕೊರೆಯಲ್ಕೇಮಮೊಡರ್ಚಲಾದೆಯಭವಾ ಪಂಪಾಪುರಾಧೀಶ್ವರಾ

೭೩

ಕರಿಯೊಲ್ದಾನವ ಸೊಕ್ಕಿ ಬಂದಡವನಂ ಪೊಯ್ದೊಟ್ಟಿ ಮೇಣಂಧಕಾ
ಸುರನಂ ಬಲ್ಪಡಿದಿಕ್ಕಿ ಮಿಕ್ಕುಮದವದ್ವ್ಯಾಘ್ರಾಸುರಧ್ವಂಸನಂ
ನೆರೆಗೈದೆಲ್ಲ ಸುರರ್ಕಳನ್ನು ಪೊರೆದಾ ದೇವಂಗೆ ಮದ್ರಕ್ಷಣಂ
ಪಿರಿದಾಯಿತ್ತೆ ಶಿವಾ ಮಹೇಶ ಸಲಹೈ ಪಂಪಾಪುರಾಧೀಶ್ವರಾ

೭೪

ಜಡಜೋದ್ಭೂತನ ನೆತ್ತಿಭುಕ್ತಿಯ ಕಪಾಲಂ ಸವ್ಯಹಸ್ತಾಗ್ರದೊ
ಳ್ಪಿಡಿಯಲ್ಸಾಲದೆ ಸೀಮೆಯಲ್ಲಿಯೆಳೆಪುಲ್ಮೇಯುತ್ತೆ ಸಂತೋಷಮಂ
ಬಡುವಾ ಪುಲ್ಲೆಯನಾತ್ಮಕಾರ್ಯದೊಲವೇನೋ ತಾಳ್ದು ಕೊಂಡಿರ್ಪೆಯಾ
ಬೆಡಗಾರ್ಬಲ್ಲರು ನೀನೆ ಬಲ್ಲೆಯಭವಾ ಪಂಪಾಪುರಾಧೀಶ್ವರಾ

೭೫

ಶಿವ ಸರ್ವಾಧಿಕ ಸಿಂಧುತೂಣ ಶಿಖಿದೃಕ್ಶೀತಾಚಲೇಂದ್ರಾತ್ಮಜೋ
ತ್ಸವ ಸಂಭಾವಿತ ಸಾಮಜಾಂತಕ ಮಹತ್ಸಾರಜ್ಞ ಸರ್ವಾತ್ಮ ನಿ
ನ್ನವನಾನಲ್ಲವೆ ದೀನಪೋಷ ಬಿಡದಾಪತ್ಕಾಲದೊಳ್ಕಾಯ್ವ ಬಾಂ
ಧವ ನೀನಲ್ಲದೆ ಬೇರೆ ದೇವರೊಳರೇ ಪಂಪಾಪುರಾಧೀಶ್ವರಾ

---

೧ ದಿಂ (ಮೂಲ)

೭೬

ಆರೇಕೆನ್ನನು ಕಾಯ್ವರಯ್ಯ ಚಿರಶೈವಸ್ವಾಮಿ ನೀನೇ ಸದಾ
ಧಾರಾಪಾರ ಸುಖಪ್ರದಾಯಕ ನಮದ್ವಂದಾರು ಮಂದಾರ ಚಿ
ತ್ಸಾರಾಚಾರ ಸುಮೇರು ಧರ್ಮ ಧವಳಾಕಾರಪ್ರಭಾಸನ್ಮಹ
ತ್ಪಾರಾವಾರ ಗಭೀರ ಪಾಲಿಸಭವಾ ಪಂಪಾಪುರಾಧೀಶ್ವರಾ

೭೭

ಸುರಸಂಜೀವನ ಸುಪ್ರಮೇಯ ಸುಮನಸ್ಸಂಕೀರ್ತನಂ ಪ್ರಿಯ್ಯ ಸುಂ
ದರ ದಾಮೋದರ ಮಿತ್ರಭಾವ ವಿನಮದ್ದಾರಿದ್ರವಿದ್ರಾವಣಾ
ಸುರಮತ್ತೇಭಮೃಗಾಧಿನಾಥ ಪೊರೆಯೆನ್ನಂ ಬೇಗದಿಂ ಕೋಟಿಭಾ
ಸ್ಕರತೇಜೋನಿಧಿಮೂರ್ತಿ ಪಾಲಿಸಭವಾ ಪಂಪಾಪುರಾಧೀಶ್ವರಾ

೭೮

ಅನ್ನಂಸಾರು ವಿನೋದದಿಂದಲುಣಿಸಲ್ಕೋಟ್ಯಾವನೀವಲ್ಲಭಂ
ಚೆನ್ನಾಗುಣ್ಣುತ ಸೌಖ್ಯವೊಂದಿದವನೇಂ ಮತ್ತೊಂದಿನಂ ಬೇಗದಿಂ
ಚೆನ್ನಯ್ಯಂ ಸುರಿದುಂಡು ಮಿಕ್ಕುದುಣಬನ್ನೆಂಬುತ್ತ ಸಂಪ್ರೀತಿಯಿಂ
ನಿನ್ನಂ ಕೂಗಲು ಪೋಗಿಯುಣ್ಣಬಹುದೇ ಪಂಪಾಪುರಾಧೀಶ್ವರಾ

೭೯

ದುಡ್ಡೇ ದೊಡ್ಡದು ಮಾನವರ್ಗೆ ನೆಲದೊಳ್ಸಂಸಾರಮಿರ್ದನ್ನೆಗಂ
ಬಡ್ಡೇ ದೊಡ್ಡದು ವರ್ತಕರ್ಗೆ ಬೆಳೆಯಲ್ವ್ಯಾಪಾರಮಿರ್ದನ್ನೆಗಂ
ವಡ್ಡೇ ದೊಡ್ಡದು ಭೂಭುಜರ್ಗೆ ವಿಷಯಶ್ರೀಸೌಖ್ಯಮಿರ್ದನ್ನೆಗಂ
ರಡ್ಡೇ ದೊಡ್ಡ ಮಹಾತ್ಮ ನಿನ್ನ ಭಜಿಸಲ್ಪಂಪಾಪುರಾಧೀಶ್ವರಾ

೮೦

ನೀನೇನಿತ್ತುದನುಂಡುಕೊಂಡು ಶಿವ ಸದ್ಭಾವಾರ್ಪಣ ತೃಪ್ತಿಯಿಂ
ತಾನಾನಂದಿಸಿಯನ್ಯ ಸೌಖ್ಯಮದು ತಾರ್ಣಪ್ರಾಯಮಂಗೈದು ಮ
ತ್ತೇನಾಗಲ್ ಗುರುಚಿತ್ತಮೆಂದು ನೆರೆಹೀನು ಚೊಕ್ಕವೊಂದಾದ ಸಂ
ಧಾನಂಗಯ್ಯೆ ನಿಜಾವತಾರದವನೈ ಪಂಪಾಪುರಾಧೀಶ್ವರಾ

೮೧

ಸಿರಿ ಸಿಂಗಾರವು ಸಿದ್ಧಿ ಸೀಮೆ ಶಿವ ನಿನ್ನಾರಾಧಿಸಲ್ಭಕ್ತಿಯಿಂ
ವರ ಸೇವಾಪರರೆನ್ನಲಿನ್ನು ಬಳಿಸಾರಲ್ಬಪ್ಪವೆಲ್ಲಿರ್ದಡುಂ
ಧರೆಯೊಳ್ನಿಮ್ಮ ಸಪರ್ಯದಿಂದವುಳಿದೆಲ್ಲಾ ಕರ್ಮಗಳ್ಭಕ್ತಿಬಾ
ಹಿರರಿಂಗಲ್ಲದೆ ಭಕ್ತರೊಪ್ಪರಭವಾ ಪಂಪಾಪುರಾಧೀಶ್ವರಾ

೮೨

ನೆರೆಯಂತಃಕರಣಂ ಮುರಾರಿ ಮನಮೇ ತಾರಾಧಿಪಂ ಬುದ್ಧಿ ವಾ
ಗ್ವರನಾಹಂಕೃತಿರುದ್ರನಾದ ಮಿಗೆ ಚಿತ್ತಂ ಮೂಲ ನಾರಾಯಣಂ
ವರುಣಂ ನಾಲಗೆ ಪಾಣಿಯಾದ ಪುರುಹೂತಂ ಸರ್ವಲೋಕಂಗಳಾ
ಕರವೇ ಮೂರ್ತಿಯೊಳಾಂತುಕೊಂಡೆಯಭವಾ ಪಂಪಾಪುರಾಧೀಶ್ವರಾ

೮೩

ಮತಮೇನಿರ್ದಡು ಬೇರೆ ಬೇರೆ ಮತಿಯಿಂದನ್ಯಾರ್ಥಸಂಧಾನಸಂ
ಗತೆಯಂ ಕಲ್ಪಿಸಿಕೊಂಡು ಚೋರಮತಸಿದ್ಧಾಂತಂಗಳಂ ನೇಮಿಸಲ್
ಪತಿ ನೀನೊರ್ವ ಚರಾಚರಕ್ಕೆ ಬದಲಾರಿಲ್ಲೆಂಬೊ ಗೌಪ್ಯಾರ್ಥವಿ
ಸ್ಮೃತಿಯಿಂ ಮಿಕ್ಕರು ಶೈವಸಾರಕಭವಾ ಪಂಪಾಪುರಾಧೀಶ್ವರಾ

೮೪

ಅಹಿತಾರ್ಥಕ್ಕನುವಾಗಿ ವಕ್ರಗತಿಯಿಂ೧[ತ]ಳ್ತಿರ್ಪಿವಾಧಿಕ್ಯ ಸ
ನ್ಮಹಿತೋಪಶೃತಿಭಾವಮಿನ್ನು ಧರೆಯೊಳ್ಪಗ್ಗಕ್ಕೆ ಪಾಪೆಂಬ ವಿ
ದ್ರುಹಿತರ್ಗಾಗದು ವೀರಶೈವಪಥ ಸನ್ಮುಕ್ತಿಪ್ರಕಾಮ್ಯಂ ಜಗ
ದ್ಬಹಿರಂತರ್ಗತ ವಸ್ತು ನೀನೆಯಭವಾ ಪಂಪಾಪುರಾಧೀಶ್ವರಾ

೮೫

ನೀಂ ಸರ್ವೋತ್ತಮನೆನ್ನರೆಲ್ಲರು ಯಮಶೃಂಗಾಟಕಂ ಮೂಕ ಸಂ
ವಾಸಂ ಪೋಲ್ತುದೆನುತ್ತ ಬಪ್ಪರೊಳು ಕಾಲಂ ಬಿನ್ನಪಂಗೈಯಲಾ
ಭಾಸಂಗೊಂ೨[ಟ್ಟು]೨ಜಲಕ್ಕನೆದ್ದು ಪಟುಮಾಯಾದೇವಿ ಮತ್ತಾಗ ಕೈ
ಲಾಸಂ ಬಿಟ್ಟು ಮಹೀತಳಕ್ಕೆ ನಡೆತಂದೋರೋರ್ವರೊಳ್ತಕ್ಕ ಬಲ್
ಮೋಸಂದೋರಿಸಲಿಲ್ಲಿ ನಿನ್ನ ಮರವೈ ಪಂಪಾಪುರಾಧೀಶ್ವರಾ

---

೧ ಕ (ಮೂಲ)   ೨ ಡು (ಮೂಲ)

೮೬

ಪೆಣಮಂ ಶೂಲದೊಳಿಟ್ಟು [ನೀನು] ಜಗದೊಳ್ಸಂಚಾರಮಂಗೈದಡೀ
ಗುಣದಿಂದಾವ ವಿಶೇಷದೈವಿಕಮಹೋಯಲ್ಪಜ್ಞರೇಂ ಭಾವಿಸಲ್
ಗಣಿತಂ ಬಲ್ಲರು ನಿನ್ನ ಲೀಲೆಯ ವಿನೋದಕ್ಕಿಸ್ನು ಲೋಕಾಳಿಯೊ
ಳ್ಪೊಣೆಯಾರ್ನೀನಧಿಕಾರಿಯಲ್ತೆಯಭವಾ ಪಂಪಾಪುರಾಧೀಶ್ವರಾ

೮೭

ಕ್ಷಣಪೊಂದಾಗಲು ನಾಡಿಯಾಗಲು ನಿಮಿಷಾರ್ಧಂ ಫಳಂ ನಿನ್ನ ಸ
ದ್ಗುಣಚಾರಿತ್ರವನೋದಿ ಪೊಳ್ತುಗಳೆಯಲ್ಮಾನುಷ್ಯಜನ್ಮಕ್ಕೆ ಭೂ
ಷಣಮಾಗಿಪ್ಪುದು ಕಾಲನಂಜಿ ಪೊಗಮೆತ್ತಂ ದರ್ಪಕಂ ಭೀತಿಯಿಂ
ಸೆಣಸಲ್ಬಾರನು ತನ್ನನೆಂದುಯಭವಾ ಪಂಪಾಪುರಾಧೀಶ್ವರಾ

೮೮

ಗುಣದಿಂ ಕಾರಣಮಿಲ್ಲ ನೀತಿ ವಿಧಿಯಂ ಮತ್ತೊಲ್ಲರೆಲ್ಲರ್ಮಹಾ
ರಣಶೂರತ್ವವ ತಂತ್ರಪಾದಮುಪಯೋಗಂ ತತ್ವಶಾಸ್ತ್ರಂಗಳಂ
ತೃಣದೊಲ್ಕಾಂಬುವರಾತ್ಮನಿಷ್ಠೆಯೆಣಿಸರ್ಸದ್ಭಾವದಿಂ ಲೌಕಿಕ
ರ್ಪಣಮೇ ಪಾವನ ಬೊಮ್ಮಮೆಂಬರಭವಾ ಪಂಪಾಪುರಾಧೀಶ್ವರಾ

೮೯

ಸ್ವರ್ಭೂಜಂ ಸುರಧೇನು ಮುಖ್ಯವರ ಚಿಂತಾರತ್ನಗಳ್ನಿನ್ನ ಭ
ಕ್ತ್ಯರ್ಭಾವಕ್ಕೆ ವಿಶೇಷವಲ್ಲ ಗಿಡದೊಲ್ಪಾಷಾಣಗಳ್ ರೀತಿ ಸಂ
ದರ್ಭಂ ಕಾಂಬರು ತೊತ್ತೆನಲ್ಕೆ ಬಗೆವರ್ನೀಲಾವತೀ ದೇವಿಯಂ
ನಿರ್ಭೀತರ್ಭವದಂಘ್ರಿಭಕ್ತರಭವಾ ಪಂಪಾಪುರಾಧೀಶ್ವರಾ

೯೦

ನಿಜ ಕರ್ತೃತ್ವವು ನಿನ್ನೊಳಿಪ್ಪ ನೆವದಿಂ ಮಿಕ್ಕನ್ಯ ದೇವಾದಿ [illegible]
ರಜ ಭೂತರ್ಕಳ ಪೊಂದಲೇಕೆ ಪೊ[illegible] ಸಾ[illegible]ಸೆನ್ನಂ [illegible]
ಧ್ವಜ ದೀನಾವನಮೂರ್ತಿ ಭೂತಪ[illegible] ಮಾರಾ[illegible]ನಿತ್ಯಂ [illegible]
ದ್ವಿಜನಾಸಕ್ತಿಯ ಭಾಗ್ಯ[illegible] ವುದಭವಾ ಪಂಪಾಪುರಾಧೀಶ್ವರಾ

೯೧

ಭುಜಶಾಖಾಳಿ ನಖಪ್ರಸೂನವಿಸರಂ ಭೂತ್ಯುಜ್ವಲಂ ಪುಷ್ಪಸ
ದ್ರುಜವಾಯಿತ್ತು ಲತಾವಿತಾನಮೆನಲೀ ಸರ್ಪಾವಳೀಮಾಲೆಗ
ಳ್ಗಜಚರ್ಮಂ ಮಧುಲಿಟ್ಸಮೂಹದೊಲು ಕಾಣಲ್ದೀನರೊಳ್ದೀವ ಭೂ
ಭುಜ ನೀನೊಪ್ಪಲು[1][ಚಿಂ][1]ತೆಯೋತಕಭವಾ ಪಂಪಾಪುರಧೀಶ್ವರಾ

೯೨

ಸುತೆಯಂ ಮೋಹಿಸಿ ವಾವೆದಪ್ಪಿ ವಿಧಿ ಬೆನ್ನಟ್ಟಲ್ಮೃಗೀರೂಪಮಾಂ
ತತಿವೇಗಂಗೊಳೆ ಕೃಷ್ಣಸಾರದೊಲವಂ ತಾಳ್ದೊತ್ತಿ ತಟ್ಟುತ್ತಿರಲ್
ಖತಿಯಿಂ ಶಚ್ಛಿರಮೆಚ್ಚು ಕಾಯ್ದು ನಭದೊಳ್ತತ್ಪುತ್ರಿಯಂ ಪಾರ್ವತೀ
ಪತಿ ವ್ಯಾಧಾಕೃತಿಬೊಮ್ಮವಾದೆಯಭವಾ ಪಂಪಾಪುರಾಧೀಶ್ವರಾ

೯೩

ಷಡ್ವರ್ಗಾಚಲಜಂಭಭೇದಿ ವಿನಮತ್ಸಾಧುಪ್ರಮೋದಾಕರಾ
ವುಡ್ವಿಟ್ಸನ್ನಿಭದಿವ್ಯಭೂತಿ ವಿಲಸದ್ವುದ್ವರ್ತನಾಂಗಾ ವೃಷಾ
ರುಡ್ವಿದ್ಯಾಧರ ಸಿದ್ಧಸಾಧ್ಯ ಘನಗಂಧರ್ವಾದಿ ಗಾನಪ್ರಿಯಾ
ಷಡ್ವರ್ಣಾತ್ಮಕ ಮೂರ್ತಿ ಪಾಲಿಸಭವಾ ಪಂಪಾಪುರಾಧೀಶ್ವರಾ

೯೪

ಶಬಲತ್ವಂ ನಿನಗಿಚ್ಛೆಯಾದ ನೆವದಿಂ ಶಕ್ತಿಪ್ರಭಾವೋಜ್ವಲಂ
ಪ್ರಬಲಂಗೊಂಡು ಭವತ್ಪ್ರಸಾದದನುವಿಂ ತಾನೇ ಜಗದ್ರೂಪದಿಂ
ತಬಕಂಗೊಳ್ಳದೆ ನಿಮ್ಮ ರೂಪದೊಲವಂ ತಾನಾಗಲೌಪಾಧಿಕಂ
ನಿಬಿಡಂಗೊಳ್ಳಲು ನಿನ್ನ ಕಂಡೆನಭವಾ ಪಂ ಧೀಶ್ವರಾ

೯೫

ನೆಗಳಲ್ಬಲ್ಲೆನು ಬಿನ್ನಪಂಗಳೊಲವಿಂ ನೈಜಪ್ರಸಾದೋಪಭೋ
ಗಗಳಂ ಸತ್ಕ್ರಮಮುಣ್ಮೆ ಮೈಸಲಧಿನಾಥಂ ನೀನು ಮನ್ಮಾನಸೋ
ಪಗತಾರ್ಥಪ್ರದನಾಗುವೇಗದಲಿ ಜಾಗುಂ ಮಾಡಲೇಕಯ್ಯ ಮೇ
ಣ್ಮಗುಳೇ[2][ನೆ][2]ನ್ನಲಿ ಬಂದು ಪಾಲಿಸಭವಾ ಪಂಪಾಪುರಾಧೀಶ್ವರಾ

---

೧ ಶಿ (ಮೂಲ)

೨ ನಿ (ಮೂಲ)

೯೬

ಶುಭ ಸಾಮ್ರಾಜ್ಯಗಳೆಲ್ಲ ನಿನ್ನ ಪದ ಸೇವಾ ಕರ್ಮದಿಂ ಬಪ್ಪುದಾ
ವಿಭು ನಿಮ್ಮಂಘ್ರಿಸಪರ್ಯೆಮನ್ನೊಳನುಗೆಯಲ್ಕೀರ್ತಿಮಾರ್ತಾಂಡ ಸ
ನ್ನಿಭ ಪತ್ಪಾದುಕ ದೋಷದೂರ ನಿರುಪಾಧಿಬ್ರಹ್ಮ ನೀನಾಗಿ ದು
ರ್ಲಭ ಮಾಯಾ ಪಟಲ ಪ್ರಮಾನದೊಲವೇಂ ಪಂಪಾಪುರಾಧೀಶ್ವರಾ

೯೭

ತಡಮಾಡಂ[ಲ್ತಿ]ರಮಲ್ಲವೆನ್ನ ಪೊರೆಯಯ್ಯಾ ನಿಶ್ಚಲಾರೋಗ್ಯಮಂ
ಕೊಡು ನೀನಲ್ಲದೆ ಕಾಯ್ವರಿಲ್ಲದ ವಿಚಾರಂ ಬಲ್ಲೆ ಸರ್ವಜ್ಞ ಕೈ
ಬಿಡದೀಗಳ್ದಯಗೈವುದಾರ್ತಜನಚಿಂತಾರತ್ನನೆಂದೈದಿ ನಿ
ನ್ನಡಿ ಚೆಮ್ಮಾವಿಗೆ ಪೊತ್ತೆನೆನ್ನ ಸಲಹೈ ಪಂಪಾಪುರಾಧೀಶ್ವರಾ

೯೮

ಸೂತಾದ್ಯಾಖಿಲ ಮೌನಿ ಶೌನಕ ಮುನೀಸೌಜನ್ಯವೃತ್ತಿಪ್ರಿಯಾ
ಜಾತಾನಂತಸುಖಪ್ರಪೂರ್ಣ ಮಹಿಮಾ ಜಾಗರ್ತಿಲೀಲಾಕರಾ
ಭೂತಾಂತರ್ಗತಚೇತನಾತ್ಮಕ ಲಸತ್ಪೂರ್ಣೇಂದುಬಿಂಬಾನನಾ
ದಾತಾ ಸ್ವಾಮಿ ದಯಾಸಮುದ್ರ ಸಲಹಾ ಪಂಪಾಪುರಾಧೀಶ್ವರಾ

೯೯

ಕಾಲಾರಣ್ಯದವಾಗ್ನಿ ಲೋಕವಿನಮತ್ಕಾರುಣ್ಯವಾರಾಶಿ ಚಿ
ಲ್ಲೋಲ[ಲೋ]ಲ್ಲಾಲಿತ ಚಿತ್ತ ಪದ್ಮವಿಹಾರದ್ರೋಲಂಬಲೀಲಾಂಚಿತ
ಪ್ರಾಲೇಯಾಚಲಜಾಧಿನಾಯಕ ಜಗತ್ಪ್ರಾಣೇಶ ಪಾಪಾಪಹಾ
ಬಾಲೇಂದುಜ್ವಲಫಾಲದೇಶ ಸಲಹೈ ಪಂಪಾಪುರಾಧೀಶ್ವರಾ

೧೦೦

ಶ್ರೀಮದ್ಭೂಮಿಭೃದೀಶಪುತ್ರಿವಿಲಸಚ್ಚಿತ್ತಾಂತಜಾತಭ್ರಮಾ
ತ್ಪ್ರೇಮಾಭ್ಯಂಚಿತಮಂಜುಮಾನ ಮಧುಲಿಟ್ನೇಶಾಪ್ತದೋಷಾಪ ಹೃ
ದ್ಭೀಮಾಧಿಕ್ಯಚರಿತ್ರಪಾತ್ರ ಮುರಭಿತ್ಪ್ರೀತ್ಯಾಸ್ಪದಾಮಾನಸಾ
ಭಾಮಾರ್ಧಾಂಗ ವಿರಾಜಮಾನ ಸಲಹಾ ಪಂಪಾಪುರಾಧೀಶ್ವರಾ

೧೦೧

ಶ್ರೀನಲ್ಲಂಗಿ ಸಮಾನ್ವಯಾಂಬುಧಿಕನಜ್ಜೈವಾತೃಕಂ ಶಂಕರ
ಧ್ಯಾನಾನಂದಿತಚಿತ್ತಸಂಗವಿಭು ನೂರ್ಪದ್ಯಂಗಳಂ ಭಕ್ತಿಯಿಂ
ತಾನುಂ ಬುದ್ಧಿಗೆ ತೋರಿದಂದದೊಳೊಡರ್ಚಲ್ಬಲ್ಲ ಸರ್ವಜ್ಞರಿ
೩[ನ್ನೀನೂರ್ಪದ್ಯಗಳಿಂ ನಿಜೈಕ್ಯ ಪಡೆವರ್ಪಂಪಾಪುರಾಧೀಶ್ವರಾ]೩

---

೧ ಲ್ತಿ (ಮೂಲ) ೨ ಲ (ಮೂಲ)

೩ ನೀನೂರ್ಪದ್ಯಗಳೋದಿ ಕೇಳಿ ನಿಜಕೈವಲ್ಯಸ್ಥಲಂಸಾರ್ದಪರ್ಪಂಪಾಪುರಾಧೀಶ್ವರಾ [ಮೂಲ]

# ಪದ್ಯಾರಂಭಸೂಚಿ

## ಬಸವಶತಕ

| ಪದ್ಯಾರಂಭ | ಪದ್ಯ ಸಂಖ್ಯೆ |
|---|---|
| ಅದ್ವಯನಪ್ರಮೇಯನಕಳಂಕನನಾಮಯನಾದ್ಯನಲ್ಲಮಂ | ೯೯ |
| ಅರಮನೆ ಕೋಣೆಯೊಳ್ಬರೆಸಿ ಜಂಗಮರೂಪಗಳೆಲ್ಲ ಚಿತ್ರದಿಂ | ೯ |
| ಅರಸಿನ ಮೋಸದಪ್ಪಣೆಯೊಳಂಗನೆಯರ್ಕೆಲರೊಮ್ಮೆ ಜಂಗಮಾ | ೭ |
| ಅರ್ಚಿಸಬಂದೆ ಸರ್ವ ಚರಮೂರ್ತಿಗಳಂ ಪರಿಣಾಮ ವಾರ್ತೆಯಿಂ | ೬೩ |
| ಅಲ್ಲ ಮನುಷ್ಯಧರ್ಮಮೆನಲೇನು ಶಿವಂ ಭವದೀಯ ಭಕ್ತಿಯಿಂ | ೭೯ |
| ಆಗ್ರಹದಿಂದಲಾದಡು ವಿನೋದದಿಂ ಹಾಸ್ಯದಲೊಮ್ಮೆ ನಿಮ್ಮ ನಾ | ೨೫ |
| ಆದಿಯೊಳಂಬಿಕಾರಮಣನಪ್ಪಣೆಯಿಂ ತದನೂನ ಭಕ್ತಿ ಸಾ | ೩ |
| ಇದು ಬರೆದೋದಿ ಕೇಳಿದ ಮನುಷ್ಯರಿಗೂರ್ಜಿತ ಭಕ್ತಿ ಮುಕ್ತಿ ಸಂ | ೯೮ |
| ಈ ಧನಮೀ ನೆಲಂ ಪತಿಸುತಾಧಿಕ ಸಂಪದಮೆಲ್ಲ ಸತ್ಪದಾ | ೫೦ |
| ಈ ವಸುಧಾಪ್ರಪಂಚದೊಳಗಿಂದುಧರಾರ್ಚಕರಿಲ್ಲದಿಲ್ಲ ಸಂ | ೯೫ |
| ಉಳ್ಳೆಯ ಮೆದ್ದ ಡೇಗು ಮಳೆಗಾಲವು ಮೀರಿದ ಸಾಗು ಸಂತೆಯೊಳ್ | ೬೮ |
| ಊರೊಳಗೊಬ್ಬ ವಳ್ಳಲೆಯ ಕೂದಲನಾರಿಸುತಿರ್ದು ಸೂರನಂ | ೨೦ |
| ಎಡಬಲದಲ್ಲಿ ಬಾಡುವೆಳಪೈರುಗಳಂ ತೊರೆದೆಲ್ಲ ನೀರ್ಗಳಂ | ೩೩ |
| ಐದುವುದುಂಟು ಸಂಚಿತಗಳೊಬ್ಬುಳಿಯಾಗಿ ಸಮರ್ತ್ತರಲ್ಲಿ ಮುಂ | ೪೭ |
| ಓಜನು ದೊಡ್ಡ ಕೊಪ್ಪರಿಗೆಯಂ ನೆರೆಮಾಡುತ ಪಿಂತೆ ಮುನ್ನವೇ | ೪೩ |
| ಕಣ್ಣೆವೆಯಿಕ್ಕುವಾ ಸಮಯಮಾತ್ರವು ನಿಶ್ಚಲಭಾವದಿಂ ಭವ | ೭೦ |
| ಕರಣಗಳೈದು ಭೂತಗಳ ಯೋಜನದಿಂ ಮರುದಿಂದ್ರಿಯಾದಿ ಸಂ | ೯೧ |
| ಕಲ್ಪಪರತ್ವದಿಂ ಭವದಮೋಘಚರಿತ್ರವಿದಾಗಮೋಕ್ತಿಯೊ | ೯೭ |
| ಕಾದಕಲಾಪನಾಣೆ ಕಮಲಾಹಿತಶೇಖರನಾಣೆ ಮಾರಭಿ | ೩೭ |
| ಕಿಂಕರನೆಂದೆ ಕಿಂಕರನ ಕಿಂಕರನೆಂದೆನು ದೂತನೆಂದೆನ್ನೈ | ೪೧ |

ಕಿಟ್ಟದ ಗೊಂಬೆಯುಂ ಮಲಗಿಸೀ ಬಸವಣ್ಣ ಚರಂ ನಿಜಾಂಗವಿ ೧೮
ಕಿರುಕುಳಮಲ್ಲ ನಿಮ್ಮ ಪದಭಕ್ತಿಯು ಲೋಕದಿ ಪೂರ್ವಪುಣ್ಯದಿಂ ೮೫
ಕುಣಿವರು ಕೂಗುವರುರ್ಬುವರುಕ್ಕುವರೊಪ್ಪುವರ್ಭವ ೯೪
ಕುಮತವಿಭಂಗ ಬಾ ಕಲಿಮದೋತ್ಪಲಜಾಲಪತಂಗ ಬಾ ನಿರ ೫೯
ಕುಲವರಸುತ್ತಲಿಪ್ಪರು ಕೆಲರ್ ಧನಮುನ್ಯರು ವಿದ್ಯೆಯುಂ ಪೆರರ್ ೭೪
ಕುಶಪಥಕರ್ಕಶರ್ ನಿಗಮ ತಂತ್ರ ಪುರಾಣಗಳರ್ಥ ಸಿದ್ಧಿಯಿಂ ೧೨
ಕೇವಲ ಚಿನ್ಮಯಾಕರ ಪರಾತ್ಪರನೇ ಪರಬೊಮ್ಮನಾದ ತಾ ೮೭
ಕೋಪಿಸಲೇಕೆ ಮುನ್ನವೆ ಮುದೀಪ್ಸಿತಮುಂ ಕೊಡು ಮತ್ತೆ ಮಾಡು ವಿ ೪೦
ಕ್ಷಿತಿಗೆ ವಿನೋದದಿಂ ಶಿವಮತೈಕಪಯೋನಿಧಿಯನ್ನು ಪೆರ್ಚಿಸಲ್ ೫೧
ಕ್ಷೇಮವು ಕೋಮಲಾಂಗ ಪರಿಣಾಮವು ಪದ್ಮದಳಾಕ್ಷ ಮೇಣ್ಣುಯೋ ೪೪
ಗುಣಗಣಬಂಧಗಳ್ದುರಿತಕೋಟಿಗಳೆನ್ನೊಳು ಕಂಡು ತನ್ನಿವಾ ೩೫
ಗುಣಮಯಮೀಪ್ರಪಂಚಮೆನಲೇಕೆ ಗುಣಂ ಪರಮಲ್ಲಮೆಂಬುವಾ ೭೮
ಗುರುಕುಲಪುಂಗವಂ ಮನೆಗೆ ಬಂದಡೆ ಪೂಜಿಸುತಿರ್ದ ಲಿಂಗವಂ ೧೩
ಚಿದ್ಘನಶೂನ್ಯರಾಗಿ ಘನಚೇತನ ಲಕ್ಷಣದಲ್ಲಿ ಮಾನಮುಂ ೫೮
ಜಯಮಯ ಜನ್ಮವೀರ ಖಳಭೂಜಕುಠಾರ ಚಿದಾತ್ಮಸಾರ ಸಂ ೫೪
ಜಿನಕುಲದಲ್ಲಿಯೊರ್ವನಿಗೆ ದೈವಕದಿಂ ತನು ಮುಕ್ತಿಯಾಗಲಾ ೮
ಜೂಜಿನೊಳೊಬ್ಬ ಜಂಗಮನು ಮಾಣಿಕಮನ್ಯರಿಗಾಗಿ ಸೋತು ತ ೨೧
ಜೈಸಿ ದುರಾತ್ಮರಂ ತ್ರಿವಿಧ ಭಕ್ತಿ ಸಮಾಹಿತ ಶೀಲಮಾಂತು ನಿ ೫೬
ತನುಮನಮಿಷ್ಟಲಿಂಗಮಯಮಾ ಘನಲಿಂಗಮಯಂ ಗುರುಕ್ರಮಾ ೮೦
ತನುವಿಡಿದೇನು ಸಾರ್ಥಕ ಮನಂಬಿಡಲೊಲ್ಲದು ದುರ್ವಿವಾದವೊಂ ೩೬
ತಾಮಸಕೃತ್ಯದಿಂ ಬದುಕಿ ತೋರದೆ ನಿತ್ಯ ವಿವೇಕ ಸಾಧನಂ ೩೧
ದೀನ ದಯಾಳುವೆಂದೆ ಗುರುವೆಂದೆ ಶಿವಾರ್ಪಣ ಕರ್ಮನೆಂದೆ ವಿ ೪೨
ದುರುಳ ನರೇಶರಟ್ಟುಳಿಗೆ ದುರ್ಗಮ ಕಂಟಕ ತಾಪಕಳ್ಕಿ ಬ ೩೨
ಧರೆಯೊಳು ಪುಟ್ಟಲೇನು ನರವೇಷದಿ ನಂದನನಾದಡೇಂ ಮಹೀ ೫೨
ಧರೆಯೊಳು ಸಾಧಕರ್ಕೆಲವರುಂಟು ನತಾತ್ಮತಮೋಪಹಾರದ ೮೬
ಧಾರುಣಿಯಲ್ಲಿ ಬಿಜ್ಜಳ ನರೇಶನ ಪತ್ತನಮುಂ ವಿನೋದದಿಂ ೧೦
ನಟನ ಚರಿತ್ರಮಂ ಶಿವನೊಡಂಬಡಲೆಂದು ಮೃದಂಗವಾದಕಂ ೮೩
ನಡೆಸುವ ನಿತ್ಯನೇಮದೊಳು ಸಾಲದೆ ಜಂಗಮರನ್ಯದೇಶದೊಳ್ ೬
ನಮದನುಕೂಲ ಬಾ ವಿತತವಾದ ಚರಾಚರ ಮೂಲ ಬಾ ಮಹ ೬೦
ನರಪತಿಯಂಗಣಂ ಬಳಸಿಯಾಗಸದಿಂದರೆಯೊಂದು ದೇವತಾ ೪
ನಾರುವ ಬಾವಿ ನೀರು ಸಡಲಿಜ್ಜಿನ ಗಾಳಿಯು ಗಡ್ಡೆದೇರು ಬ ೬೬
ನಿಮ್ಮನೆಯಲ್ಲಿ ತಂಗಿ ಪೊಸತಾದ ವಿಚಾರವನಾಂತಳಂತದೇಂ ೨೩

ನಿರುಪಮ ನಿರ್ವಿಕಲ್ಪ ನಿಗಮಾಗಮ ಸೇವಿತ ನಿತ್ಯ ನಿಸ್ಪೃಹಾ ೨೭
ನೀತಿ ವಿವೇಕ ನಿರ್ಮಲಗುಣಂಗಳನಾರಿಸಲಿಲ್ಲವೆನ್ನೊಳೀ ೩೯
ನೆರವಿದ ಭೂರಿಭೋಜನ ಪದಾರ್ಥ ವಿಶೇಷಗಳೆಲ್ಲವೆಲ್ಲಮಂ ೧೪
ಪಗಲಿರುಳಚ್ಚ ಮಚ್ಚಿಗೆಯು ಪಟ್ಟು ಗುಹೇಶ್ವರಲಿಂಗದಲ್ಲಿ ಬೆ ೨೬
ಪಲ್ಲವನಂತೆ ಬಂದು ಚರನೊರ್ವನು ನಿಂಬೆಯನಿತ್ತು ನಿಂಬೆ ತ ೧೨
ಪಾಪಮುಖಾರಿ ವರ್ಗದ ವಿಘಾತವೊ ಪಾಟಿಸೆ ದಂಡಧಾರ ಘಂ ೫೩
ಪಾರಗರಾರು ನಿನ್ನ ಚರಿತಾಂಬುಧಿಯುನ್ನತವಾಗೆ ಬಣ್ಣಿಸ ೮೮
ಪೆತ್ತರು ತಂದೆತಾಯ್ಗಳುಪಚಾರವನೊಪ್ಪಿ ನೆಗಳ್ದರೆನ್ನ ಸಂ ೪೮
ಬತ್ತಿಸಬಂದೆ ದುರ್ಭವ ಪಯೋನಿಧಿಯಂ ಬರಿಗಾಲಿಲ್ಲೈದಿ ದಾ ೬೭
ಬಂಧವಿಮೋಚನಕ್ಕೆ ಸಕಲೇಶವಿತರ್ಕವಿನೋದ ಸಿದ್ಧ ವಿ ೮೧
ಬರಿಯ ವಿವಾದವನ್ನು ಬಗುಳಾಡುವ ಲಂಡಲಿಗಾಡಿಗರ್ದುರಾ ೯೭
ಬಾಡುವ ನೆಲ್ಲುಸಾಲು ಕಿರುಗೆಜ್ಜೆಗಳುಚ್ಚಿದ ಲುಲ್ಲು ಮೆದ್ದಡ ೬೫
ಬಾಣನ ಭಕ್ತಿಯಂ ಮನೆಯ ಬಾಗಿಲು ಬಲ್ಲುದು ಪಾರ್ಥ ಭಕ್ತಿಯಂ ೬೯
ಬಿನ್ನಪವಾರ್ತರಕ್ಷಕ ತುಳಿಲ್ಪಸವಾ ಶರಣಾರ್ಥಿ ಶೀಲ ಸಂ ೭೬
ಬೀದಿಯೊಳೊಂದು ಪಾಪಿಗಸುವಿಲ್ಲದೆ ಬಿದ್ದಿರಲಾಗ ಹಾಸ್ಯದಿಂ ೧೧
ಬೆಸುಕಿಯ ಬೆಳ್ಳಿಯಂ ಕರಗಲೂದಿದಡಾ ಕಸುರೆಲ್ಲ ಸೀಸಮೇ ೯೦
ಬೇಯದ ಕೂಳು ಬಿತ್ತಲುಪಯೋಗಕೆ ಬಾರದ ಬೀಳು ಕದ್ದು ಬಾ ೬೨
ಭವಿಗಳು ಭಕ್ತರಾಗಿ ಗುರುಲಿಂಗ ಚರಾರ್ಚನೆಯಲ್ಲಿ ನಿಷ್ಠೆಯಂ ೫
ಭುವನಗಳಬ್ಧಿಗಳ್ಗಿರಿಗಳರ್ಕಶಶಾಂಕಮುಖಪ್ರದೇವತಾ ೨೪
ಭೂಪತಿ ಕೇಳಲೊಮ್ಮೆ ಬಸವಾ ನಮಗೇಂ ಶರಣಾರ್ಥಿಯೆನ್ನದೇ ೧೬
ಭೂಸುರನಾಕಳಂ ತನುವಿಡಲ್ಕೆ ತದಂಗನೆಯಂದು ದುಃಖದಿಂ ೭೭
ಮಂಗಳಮೂರ್ತಿ ನಿನ್ನ ಪದಸೇವೆಯೊಳಚ್ಯುತಭಕ್ತಿಯಿಂದ ನ ೯೬
ಮಂಜುಳಮುಕ್ತಿಕಾಂತೆಯ ಕಚಸ್ಥಲಶೋಭಿತ ಚಾರು ಮಲ್ಲಿಕಾ ೭೯
ಮತ ವಿಷಯಂಗಳಲ್ಲಿ ಬಿಡದಾರು ವಿಚಾರದ ಲೀಲೆಯಿಂ ಗಣೋ ೫೫
ಮತ್ತ ಗಂಜಂಗಳಿಂ ಕೊರೆಯೆ ಸೋಲದು ಸಿಂಗನು ಭಾನುವೆಂದು ಕ ೯೩
ಮನಸಿಗೆ ಮಂಗಳಂ ಮತಿಗೆ ನಿಸ್ತುಲಸಿದ್ಧಿಯು ಚಿತ್ತಕೂರ್ಜಿತಂ ೪೫
ಮರುಳರು ಮಂಕರೆಂದೆಣಿಸಲೊಲ್ಲದೆ ಬಂದ ಚರರ್ಕಳೆಲ್ಲರಂ ೨೫
ಮಹದವತಾರ ಬಾ ವಿಶದಕಾಂತಿಮಯಾತ್ತ ಶರೀರ ಬಾ ಭವಾ ೬೧
ಮಿಸುನಿಯ ಮುದ್ದೆ ಪೆಟ್ಟಿಗೆಯೊಳೊಪ್ಪುತಿರಲ್ಕಸುಗಂಪನಲ್ಲಿ ನೇ ೮೯
ಮುತ್ತಿನ ಬೆಜ್ಜಮಂ ನೆಗಳಬಲ್ಲವನಿಂ ಬೃಹದಶ್ಮರಂಧ್ರವೊ ೪೯
ಮೋಹಮಯ ಪ್ರಪಂಚದಲಿ ಮಂಡಿಸಿ ನೈಜವಿವಾದವಾತ್ಮವೀ ೨೨
ಲೋಹವು ಕೇಳಿದರ್ಗೆ ರಜತಂ ರಜತಕ್ಕೆ ಸುವರ್ಣಮಿನ್ನದಂ ೨೩

ಶಂಕರ ವಿಗ್ರಹಂ ಮರುಳಶಂಕರದೇವನು ಚಿತ್ಪ್ರಸಾದ ಶೇ ೧೫
ಶಿವನೊಡನಾಟವೀಸರನೊಳೂಟವು ಶಂಕರನಲ್ಲಿ ಕೂಟ ವಿ ೮೨
ಶುಷ್ಕಮಹೀಜಮಿಲ್ಲ ಸುಳಿಗುಂದುವ ಪೈರುಗಳಿಲ್ಲ ನೋಡ ನಿ ೫೭
ಶ್ರಿತಜನಕಲ್ಪಭೂಜ ಶಿವಚಿತ್ಸುಖಸಾಗರಪೂರ್ಣರಾಜ ಸ ೨೮
ಶ್ರೀಗುರುಲಿಂಗಜಂಗಮಸಪರ್ಯಸಮಾಧಿವಿಶೇಷಸಾಧನೋ ೨
ಶ್ರೀಪರಮೇಶ ನಿತ್ಯ ಪರಿಪೂರ್ಣ ಸುಖಾಕರ ಮೂರ್ತಿಯೆಂಬ ಪಂ ೧೦೦
ಶ್ರೀಮದನಂತಪೂರ್ಣಗುಣರತ್ನಸಮಾಹಿತ ಮಾರಭಿನ್ಮತೋ ೧
ಸಕಲರೊಳಾನು ಮೂರ್ಖನಹುದಯ್ಯ ಭವಚ್ಚರಣಾಂಬುಜಾತ ಪಾ ೪೬
ಸಮ್ಮತಪೆಮ್ಮ ರಕ್ಷಿಪುದು ಸತ್ವರದಿಂದಿದು ನಿಮ್ಮ ಸೊಮ್ಮು ಮೇ ೩೮
ಸಮ್ಮತಸಿದ್ಧಿಯಿಂ ಪರಮಸಾಧನವೃತ್ತಿಯ ಪೂರ್ಣಮಾರ್ಗಮಂ ೩೪
ಸವೆಯದ ಚಿತ್ಪ್ರಕಾಶ ಸಟೆಯೊಂದದ ಶಾಸ್ತ್ರವಿಶೇಷಕೋಶ ಸ ೭೧
ಸುಮತಕೆ ಶೀಲವಾವುದೊ ಶಮಾದಿಗಳೆಂದನಲೇನು ಮಿಕ್ಕ ಗೌ ೩೦
ಸಾಕ್ಷರ ಸಿದ್ಧಿಯಿಂ ಸಕಲಲೋಕ ವಶೀಕರಣಾದಿ ಸತ್ಕಳಾ ೨೭
ಸಾಲಿಯ ಚಿಕ್ಕವಂ ಪಲಗೆಯಂ ತೊಳೆವುತ್ತಿರೆ ಬಾವಿಯಲ್ಲಿ ತ ೧೯
ಹರನಪರಪ್ರಕೃಷ್ಟ ನವಲೀಲೆಯನೀ ನೆಲದಲ್ಲಿ ತೋರ ಬಂ ೨೪
ಹೊಟ್ಟೆಯ ಕೂಳಿಗಾಗಿ ನರಪಾಲರ ಸೇವೆಯನೊಪ್ಪಿ ಸತ್ಪಥಂ ೪೮

## ಭುವನೈಕನಾಯಕೀಶತಕ


| ಪದ್ಯಾರಂಭ | ಪದ್ಯ ಸಂಖ್ಯೆ |
| --- | --- |
| ಅಕ್ಷಿಗಳಾನನಾಧರಗಳಂಘ್ರಿಗಳಿಂದಲಮೋಘ ಮೂರ್ತಿ ಪ್ರ | ೫೯ |
| ಅಂಗ ಸಮುದ್ರದಲ್ಲಡಗಿ ತೇಲುವ ಶೈಲಗಳೇನೋ ಪದ್ಮಕೋ | ೮೮ |
| ಅಚಲವದಂಗದಲ್ಲಿ ಬಸುರೇ ಬಲು ಜೀವನರಾಸಿ ಭಕ್ತ ಸ | ೮೭ |
| ಅನುಸರವಾಗಿ ತೋರ್ಪ ತನುವಲ್ಲರಿಯಲ್ಲಿ ಲತಾಂತ ಗುಚ್ಛಮಂ | ೭೦ |
| ಅರಿದರೆ ಪಂಕ ಭಂಗ ಜಡರಾಶಿಗಳಿಂ ಪರಿಪೂರ್ಣವಾಗಿ ದು | ೨೯ |
| ಅರುಣವಿಲಾಸಮೈದು ಸಿತ ಸದ್ವಿಜಕಾಂತಿಯಸಹ್ಯಮಿಲ್ಲದಿಂ | ೯೫ |
| ಆನನಮಬ್ಜಮೆನ್ನಲು ಷಡಂಘ್ರಿಗಣಕ್ಕುಪವಾಸ ಕಾಂಚನ | ೯೮ |
| ಆರಡಿಯೊಪ್ಪುದಾವರೆಯನರ್ಚಿಸಲಾಕ್ಷಣ ಮುಕ್ತ ಕಾಂಚನೋ | ೬೮ |
| ಇಂದ್ರ ಮಹೇಂದ್ರಜಾಲ ಶತಕೋಟಿಗೆ ದೃಕ್ಕೆನಲಾದ ನಿನ್ನ ನಿ | ೬ |
| ಉತ್ತರಶೈಲ ಭೂನಿಕಟಮಾಂತು ವಿರಾಜಿಪುದಂಗದೇಶಮಂ | ೧೦೦ |
| ಓದಿಗೆ ಮುಟ್ಟಲೋದುವುದು ಕಾದಿಗೆಯಾದಿಗೆ ಮೂಲವಾದ ಚಿ | ೪೧ |
| ಕಃಪದವಮ್ಮ ಬೊಮ್ಮ ಸಿರಿಯಾಣ್ಮರ ಪೋಷಣಮಬ್ಧಿ ಸಂಭವಾ | ೫೩ |
| ಕಂಗಳು ನಾಲ್ಕು ನಾಲ್ಕೆರಡು ಕಂಗಳಲೊಪ್ಪಿದೆ ಸೃಷ್ಟಿಯಂ ಬಳಿ | ೫೨ |
| ಕಂಗಳು ಭೂಮಿ ಮಾರುತ ಮರುತ್ಸಖ ಮೂಲಗಳಲ್ಲಿ ಕೂಡಿಲೋ | ೪೨ |
| ಕಚರಚನಾಚಮತ್ಕೃತಿಗೆ ಮಂಗಳಮಾನನಮೆತ್ತಲಾದುದೀ | ೨೧ |
| ಕಡೆ ಮೊದಲೈಸಿ ತೋರದ ತರಂಗ ಪರಂಪರೆಯಬ್ಧಿಯಲ್ಲಿ ಸಂ | ೩೦ |
| ಕಂಟಕಕುಬ್ಬಸಂ ಕಲುಷಜಾಲಕೆ ಮುಮ್ಮಳಿ ಜೇಷ್ಠಳೆಂಬ ಬ | ೧೧ |
| ಕನಕ ವಿಕಾರಮಾದ ಕಟಕಂಯುಡಿಸೋಂಕಲು ವರ್ಣ ವ್ಯತ್ಯಯಂ | ೬೬ |
| ಕರಗದ ಮಾಟದಿಂದುರುಬು ಕಂಧರಮಟ್ಟಿಟಿಮಾಡಿ ಮೆಟ್ಟಿಸ | ೫೧ |
| ಕರಚರಣಾಕ್ಷಿನಾಸಿಕ ವಚಃಶ್ರುತಿ ಮುಖ್ಯಗಳಿತ್ತೆಕಾರಿಜಮ್ | ೪೩ |
| ಕರುಣಿಸು ಕಾಮಿತಂ ಕಿಸಲಯಾಂಬಕೆ ಕೀರವಿಲಾಸೆ ದುರ್ಭವಾಂ | ೨೫ |
| ಕಾಂಚನ ನಾಸಿಕಂ ಮೊಗದೊಳಾಮೊಗಮಂಬುಜಮಂಬುಜಕ್ಕೆ ಬಲ್ | ೮೭ |

ಕಾಣದ ಲೋಕವಾರ್ತೆಯನು ಕೈಪಿಡಿದರ್ದನುಜಾತರಾತ್ಮಕ ೬೯
ಕಾಮನ ಜರ್ಜರಿಲೀಂ ಸಗುಣಧಾರ್ಮಿಕನೇಂ ಗತಪುತ್ರಮೋಹಮಂ ೪೬
ಕಾಯವೊ ಕಾಲವೋ ಗುಣವೊ ನಾದವೊ ನಾಡಿಯೊ ಶಬ್ದವರ್ಣವೋ ೨೪
ಕಾಳಿಗೆ ಕಂಜಮಿತ್ರನು ಪಟೀಯನು ವಾಸರದಲ್ಲಿ ಮೇಣ್ ಮಹಾ ೨೦
ಕುಚಕನುಪಂ ಗಿರೀಶನು ಮೊಗಂ ನೆರೆಪೊಂದಿದ ಸೋಮನೊಪ್ಪಿದಂ ೩೫
ಕೇಸರಿವಾಹನಂ ಕುರಿತು ಕುಳ್ಳಿರಲೊಪ್ಪಿ ಕುಚದ್ವಯಂಗಳಿಂ ೭೭
ಕೋಮಲ ನೀಲಭಾಸ್ವದ ಕಳೇಬರಮೊಪ್ಪಿತು ನಿರ್ಗುಣೈಕ ಚಿ ೧೮
ಕ್ಷಿತಿಯನುವಾಲವಾಲದಲಿ ಸ್ವರ್ಧಮವಿನ್ನಯ ದಿವ್ಯಮೂರ್ತಿರಾ ೯೨
ಗುಣಗಣರತ್ನಭೂಷಣಮಯಾಂಗಿಗಲಂಕೃತಿಯೋ ಕಟಾಕ್ಷವೀ ೧೬
ಚಂಡಿಕೆ ನಿನ್ನ ವೈತರಣಸಂಭವಕೀರ್ತಿ ಮೃಗಾಕ್ಷಿಸನ್ನುತಾ ೭
ಚಾಪಲಸತ್ಕರಾರುಣ ಸರೋರುಹಸಂಗತ ಕುಂದ ಕಂದುಕಂ ೬೫
ಚಾರುಪರತ್ವಮಂಬುದ ಗುಣಂ ನೆರೆವಿದ್ರುಮ ಧರ್ಮಮಂದುವೈ ೧೪
ಚಾರು ಸುವರ್ಣಕೋಟಿ ಖಚಿತಾಮಲರತ್ನವಿಶಾಲಕಾಂತಿ ಕೋ ೭೬
ಜನನಿ ತಮೋವಿಮೋಚನವಿಲೋಚನರೋಚಿಗಳಿಂ ಮಹೇಶನಾ ೫
ಜಯತು ಪರಾಪರಾಗವರಜಾ ಶರಜಾವರಜಾನುಮೋದಕಾ ೮೨
ಜಯತು ಮಹೇಶ್ವರೀ ಜಯತು ಜನ್ಮಜರಾಮರಣಾದಿಕಷ್ಟದು ೪೦
ತಕ್ಕ ವಿಚಿತ್ರರೂಪು ಶತಧಾಶತಕೋಟಿ ಸಹಸ್ರಧಾಮ ಸ ೯
ತನುಕರಣೇಂದ್ರಿಯಂಗಳನು ಧಾವಿಸಲೈಸೆ ಪದಾರ್ಥದಲ್ಲಿ ಮೋ ೨೨
ತನುವಿಡಿದಾತ್ಮರಾಶಿಗೆ ಬರಲ್ಪಹುಶಃ ಭವದೀಯ ಸತ್ವದಾ ೫೪
ತಪಿತ ತಪೋಮಯಾಗ್ನಿ ಘನಮಾಗಿರೆ ಮನ್ಮಥವೀರ ಮುಕ್ತ ಸಂ ೪
ತಾಮರಸಂಗಳಂಘ್ರಿಮುಖನೇತ್ರಕರಂಗಳು ಮಿತ್ರಜಾಹೃದೋ ೬೯
ದಕ್ಷಸುರಕ್ಷಿತಾಖಿಲ ವಿಲಕ್ಷಣವೈಭವವಧ್ವರಾಂಗಣೋ ೩೭
ದಾನವತಾರಕಂ ಮುಳಿದು ದೇವಪುರಂ ಸೆರೆಗೊಂಬುತಿಂದ್ರನಂ ೧೩
ದಾನವನೆನ್ನಲುಂ ಜಗಿವುತಾರ್ಭಟಿ ಘೋರ ಕಠೋರ ನಾದದಿಂ ೨೮
ದಾನಿಗೆ ಕರ್ಣತಾಲಸದನಿಂದಿತ ಸದ್ಗತಿಯಪ್ಪುತುಂ ಘನ ೩೬
ದೀನಮನೋಹರೇ ದಿವಿಜಧೇನು ಸಹಸ್ರಕರೇನು ದಿವ್ಯ ಸಂ ೮
ನಡುವಪಕಾರದಿಂ ಕಪಟಿಗಂಬರಮೊಂದಲಹಾರಮಿಲ್ಲದೊ ೭೮
ನವನವರತ್ನಪೂರ್ಣಭರಣೇ ಶರಣೇ ಶರಣೇತಬುದ್ಧಿ ಸಂ ೮೧
ನವನವವೃತ್ತ್ಯಯಂಗಳೆನಗೊಂದೆ ನಿವಾಸಕೆ ಮಾಟವೆನ್ನಲೊ ೮೪
ನಾದವಿನೋದಿನೀ ಕಲುಷಭೇದಿನಿ ಪಾಲಿತಮೋದಿನೀ ಗುಣೋ ೧೭
ನಾರದಗಾನಮಾಲಿಸಿ ನಿನಾದಕೆ ನೀಂ ತಲೆದೂಗಲಾಗ ಮುಂ ೫೫
ನಾರಿಗೆ ಪಲ್ಲವಪ್ರರಮ್ಯೆಸಲು ಮಾರನವೀರನೆಂಬರೇಂ ೫೬

ನಿನ್ನ ಕಟಾಕ್ಷವೀಕ್ಷಣ ವಿಶಾಲತಟಿಲ್ಲತಿಕಾಂತಮೂಲವೆಂ ೩
ನಿನ್ನಡಿಯರ್ಚನಂ ತವಕಥಾಶ್ರವಣಂ ಭವದೀಯ ದಾಸ್ಯಮುಂ ೬೧
ನೀಂ ಕುಕಳಾಮಯೀ ದೊರೆಯೆಯೆನ್ನೊಳಗೆಂದು ತವಾಸನಾಬ್ಜಮಂ ೬೨
ನೀಲಸರೋರುಹಾಕ್ಷಿ ಭವದೀಯಮನೋಜಶರಾಸನ್ನಿಭ ೭೧
ನೂಕುವ ನಾಕಮಂ ಬಿಡದೆ ತಾಗುವ ಲೋಕವನೇಕಮಂದುನಾ ೧೨
ಪದ್ಮಪದಂಗಳಿಂ ಮಕರಕುಂಡಲ ಕುಂದರದಂಗಳಿಂ ಮಹಾ ೭೫
ಪದ್ಮಿ ಸುವರ್ಣಸದ್ಗುಣ ಸಮಾಹಿತ ನಿಷ್ಕಪಟಾವಲಂಬನಂ ೬೪
ಪವಿಮಣಿ ಕಿಂಕಿಣೀಕಲಿತ ಪಾದಯುಗಂ ಕುಡುಗಾತ್ಮ ಸಾತ್ವಿಕ ೭೪
ಪಾವನಗೇಹ ದೇಹಮದು ನೀಲ ಸಮಾಶ್ರಿತಮಂಗದೋಪ ಸಂ ೮೯
ಪಿಡಿಗನುವಾಗೆ ಕೇಸರಿಗೆ ಪಾಸಟಿಯಾದುದು ಮಧ್ಯಮಕ್ಷಿ ೩೪
ಪಿಂತೆ ಮಹಾಪುಳಿಂದ ಮೃಗಯಾಮಲ ಲೀಲೆಯನಾಂತು ಕೃಷ್ಣ ಸಾ ೯೬
ಪೂರ್ಣ ಪರಾಗ ಸಂಘಟನದಿಂದುಯಾಸ್ತಮಯಂಗಳೆಂಬವಂ ೫೮
ಬಡತನಮಿರ್ದಡೇಂ ಕೊಡುವದಾತಗೆ ದುಡ್ಡದು ದೊಡ್ಡದಲ್ಲ ಮೇ ೩೩
ಬಲ್ಪೊರವಾರಗಳ್ ಘನತೆ ಸೈ ಬಿಡದಂಬರಮೈಸಿ ದೃಷ್ಟಿಯಿಂ ೯೩
ಬಾಲಕುಮುದ್ವತೀರಮಣಭೂಷಿತ ಕೋಟಿ ದಿನೇಶ ಪೂರ್ವರು ೧೯
ಬಿಡದೆ ಕನಿಷ್ಟಕಾಸ್ಪದಮಿರಲ್ ಕರವೊಂದಿ ಬಹಿಷ್ಕೃತಕೆ ಸಂ ೮೦
ಬಿದಿನೆರೆ ಪುಟ್ಟಿಪಂ ಪೊರೆವ ಕಾರೊಡಲಂ ಕಿಡಿಗಣ್ಣನೊಪ್ಪಿಪಂ ೩೧
ಬೆರಸಿದ ದುಷ್ಟವರ್ಣಗಳು ಶಂಖದೊಳಿಲ್ಲ ಪರಂತು ಬೊಮ್ಮ ತಾಂ ೮೫
ಬೇಡಿದಡೀವುದೇ ಘನತೆ ಬೇಡದಲಿಪ್ಪುದವಕ್ಕು ಮೇಲ್ಕಣಾ ೪೪
ಭುವಿಯಣುವಾಗಿ ಪೊತ್ತನವನಾವನಮಂ ಗುಣಮಾದನಾ ನಿಂ ೯೦
ಭೂತಪತಿತ್ವಮೇಂ ಭುಜಗಭೂಷಣಮೇಂ ತಲೆಯೋಡೊಳುಂಬುದೇಂ ೧೦
ಮಂಗಳ ಸಂಗತಿಂ ಗಜಕೆ ಚಿತ್ರವಲಾ ನಖಜಾಲತಾರಕಾ ೨೬
ಮದನನನಂಗಮಾಗುತಿರಲಂದು ಭವತ್ಕೃಪೆಯೊಂದಿ ನಾರಿಯುಂ ೭೩
ಮನವತಿ ಸೂಕ್ಷ್ಮವಲ್ಲಿರಲು ನೀಂಕಡುಸೂಕ್ಷ್ಮಳು ನಿನ್ನೊಳೊಪ್ಪಿತೆಂ ೯೧
ಮಾರನನೂನ ವೀರನಖಿಲಾಂಬಕ ದಾರನಗಾಧ ಸಾರವಿ ೬೭
ಮಾರವಿರಾಗ ಸಲ್ಲಲಿತ ಮೋಹನ ನಾಟಿ ಕುರಂಜನಂಗಳಿಂ ೨೩
ಮೆರೆವ ಕಟಿಪ್ರದೇಶವು ರಸೋಪದುಮೇ ವಿಪರೀತ ಸಾರಮಂ ೯೪
ಮೊದಲು ರತಿಪ್ರಮೋದದಿ ಮುಖಂಬಿಡದಗ್ನಿವದಾಂಶಭೂತನೆಂ ೭೯
ವನವನಜಾಕ್ಷಿಯಂ ತಲೆಯೊಳಿಟ್ಟ ಮಹಾಚಲನಾಥಜಾತಟಿ ೪೫
ವಾಮನದಾನವಾರಿ ಕರಮಿಟ್ಟಡಿಗೈಯುತ ದಕ್ಷಿಣಾಸೆಯಿಂ ೩೨
ವಿತತ ಪರೋಪಕಾರದಲಿ ಸತ್ಪಥರೊಪ್ಪಿ ಶಿವಾರ್ಪಿತಾನುಪ ೪೮
ವಿತರಣವೊಪ್ಪಲಾಗಿ ಭವಸಾಗರಮೇನದು ದಾಟಲಾದುದೆ ೪೭

ಶಂಕರಮೂರ್ತಿ ನಿನ್ನೊಳಗೆ ಶಂಕರನೊಳ್ ಭವದೀಯಮೂರ್ತಿಯೀ ೭೩
ಶರಣು ಚಿದಂಬರೇ ವಿಧೃತಶಂಬರೆ ಸನ್ನುತದೇವ ತುಂಬುರೆ ೧೫
ಶುಭ್ರನಖವ್ರಜದ್ವಿಜಸಮೂಹಮನಂತಕಳಾಮಯಾಂಗದಿಂ ೭೨
ಶುಂಭನಿಶುಂಭರೀ ಪಶುಗಳಧ್ವರಮಂಟಪಮಾಜಿಚತ್ವರಂ ೩೮
ಶೇಷಕಲಾಪನಾತನುಯಶೇಷಕಲಾಪಳು ನೀನು ತದುಜ್ಞಾ ೬೩
ಶ್ರೀಕರವಾಗಿ ತೋರ್ಪ ನಿಗಮಾಗಮ ಸನ್ನುತೆ ನೀನೆಯುತ್ತಮ ೫೭
ಶ್ರೀನಿಧಿ ನಿನ್ನ ಮೈಸಿರಿಗೆ ಪೋಲುವರಾರ್ಭುವನೈಕ ಸುಂದರೀ ೯೭
ಶ್ರೀಪರಮೇಶ್ವರೀ ಗಗನದಂತೆ ವಿರಾಜಿಪುದೇನು ನೀಂ ಜಗ ೧
ಶ್ರೀಮಹದಾದಿ ಕಾರಣೆ ಗಣೇಶಮುಖಾಮರ ಸೇವ್ಯಮಾನೆ ಭ ೨
ಶ್ರುತಿಪರಿಯಂತರಂ ವಿಲಸದಾಯತ ಧರ್ಮಕ್ಕೆ ಚಂಚಲತ್ವ ಕು ೫೦
ಸಾಲು ತರಂಗ ಸಂಗತಿಗೆ ಸಾಲುವನಂಕ ವಿಯೋಗದಿಂದ ಕೀ ೪೯
ಸ್ನೇಹ ಸಮೃದ್ಧಿ ಬೀಜಮದರಿಂ ಬಗೆಗೊಂಬುವುದುತ್ತರೋತ್ತರಂ ೯೯
ಹರಿಗವಗಾಹನಂ ಶಿವಗೆ ಕುತ್ತಿಗೆ ವಾಟ್ಟವನಂತ ಸಿಂಧು ವಾ ೨೭
ಹರಿಹರ ಪದ್ಮಜರ್ಮೊದಲು ಶುದ್ಧ ಭವಚ್ಛುಭನಾಮ ಮುಖ್ಯವೆಂ ೬೦

# ಸಂಸಾರಶತಕ


| ಪದ್ಯಾರಂಭ | ಪದ್ಯಸಂಖ್ಯೆ |
| --- | --- |
| ಅಣುವಾಗಿಪ್ಪೆ ಮಹತ್ವವೊಪ್ಪಿರೆ ನಿದಾನತ್ವಕ್ಕೆ ಪಕ್ಕಾಗಿ ಮೆ | ೬೫ |
| ಅತಿಸಂಪನ್ನತೆ ನೀತಿಭಾವಮಿಡಿದೊಪ್ಪುತ್ತಿಪ್ಪ ಸಚ್ಛಾಸ್ತ್ರಸಂ | ೩೪ |
| ಅನಲಂ ನೀರೆನಲಾದುದಂತೆ ಮೃಗರಾಜಂ ಜಿಂಕೆಯಾಗಿರ್ಪುದೆಂ | ೩೨ |
| ಅನ್ನಂ ಸಾರು ವಿನೋದದಿಂದಲುಣಿಸಲ್ಚೋಳಾವನೀವಲ್ಲಭಂ | ೭೮ |
| ಅಮರದಾನವರಬ್ಧಿಯನ್ನು ನೆರೆಪೀಯುಷಾರ್ಥದಿಂ ಮಂಥನಂ | ೮ |
| ಅರಸಲ್ದೇವ ಭವತ್ಪದಂಗಳನು ವೇದಂಗಳ್ಬೊಗರ್ಗಣ್ಣಕು | ೨೩ |
| ಅಹಿತಾರ್ಥಕ್ಕನುವಾಗಿ ವಕ್ರಗತಿಯಿಂ ತಳ್ತಿರ್ಶಿವಾಧಿಕ್ಯ ಸ | ೮೪ |
| ಆರೇಕೆನ್ನನು ಕಾಯ್ವರಯ್ಯ ಚಿರಶೈವಸ್ವಾಮಿ ನೀನೇ ಸದಾ | ೭೬ |
| ಆರೋಗ್ಯಕ್ಕನುಕೂಲನಾಗಿ ನೆರೆ ನೀನೇ ವೈದ್ಯನೆಂದೆನ್ನೊಳುಂ | ೫೯ |
| ಇಳೆದೇರ್ತೇರಿನ ಪೊತ್ತ ನಾರಿಯುದು ಮುಂಚಂಗೈದ ಕೋಲ್ಕೋಲಿನೊ | ೫೪ |
| ಎಂದೆಂದಿಲ್ಲವಿದೆಂಬನೊರ್ವನು ಚಿಕೀರ್ಷಾವಶ್ಯದಿಂದಾಗಿ ದಿ | ೩ |
| ಕಣಕಾಲ್ಮುಟ್ಟುವ ದಟ್ಟಿ ಪೆರ್ಬುಲಿದೊಗಲ್ಮಿರ್ಪ್ಪುದ ಬಲ್ ಪಿರ್ರಿಚ | ೧೬ |
| ಕನಕಾಗೇಂದ್ರವು ಕೈಯೊಳಿನ್ನು ಕರವೊಪ್ಪುತ್ತಿರ್ದು ಯಕ್ಷೇಶ್ವರಂ | ೪೦ |
| ಕಂದರ್ಪಧೃತಿಕಾಲಮೇಘ ಪಟುಜಂಝಾವಾತ ದುರ್ದಂಡಭೃ | ೧೯ |
| ಕರಿಚರ್ಮಾಂಬರ ಕಾಲಕಾಲ ಕರುಣಾಪಾರಾನಿಧೀ ಪಾಪನಿ | ೩೭ |
| ಕರಿರಾಜಾಸ್ಯ ಷಡಾನನಾದಿ ಗಣರಾಶಿಪ್ರೇಮ ನೀರೇಜಭಾ | ೫೩ |
| ಕರಿಯೊಲ್ದಾನವ ಸೊಕ್ಕಿ ಬಂದೊಡವನಂ ಪೊಯ್ದುಟ್ಟಿ ಮೇಣಂಧಕಾ | ೭೩ |
| ಕರುಣಾಪಾಂಗದಿ ನೋಡುನೋಡು ಮನದಿಷ್ಟಂ ನೀಡುನೀಡೆನ್ನನಾ | ೩೫ |
| ಕಸೆಯಿಂದೊಪ್ಪುವುದಂಗಿ ದೊಡ್ಡ ಪೊಲದೊಳ್ಬೀಜಾರ್ಪಣಂಗೈಯೆಬ | ೬೯ |
| ಕಾಲಾರಣ್ಯದವಾಗ್ನಿ ಲೋಕ ವಿನಮತ್ಕಾರುಣ್ಯ ಪಾರಾಶಿ ಚಿ | ೯೯ |
| ಕ್ಷಣವೊಂದಾಗಲು ನಾಡಿಯಾಗಲು ನಿಮೀಷಾರ್ಧಂ ಫಳಂ ನಿನ್ನ ಸ | ೮೭ |
| ಗಿರಿಜಾರೂಪವ ಕಳ್ತುಕೊಂಡು ನಡುಮುನ್ನಿರ್ಪೊವಕ್ಕು ಪಾತಾಳಮುಂ | ೭೨ |

ಗಿರಿಜಾವಲ್ಲಭ ಗಾನಲೋಲ ಗಣನಾಥಪ್ರೀತ ಗಂಗಾಧರಾ ೬೭
ಗುಡಿ ಗುಂಡಾರಗಳಲ್ಲಿ ಪೊಳ್ತುಗಳೆವುತ್ತ ಯೋಗಸಂಧಾನಮಂ ೪೩
ಗುಣದಿಂ ಕಾರಣವಿಲ್ಲ ನೀತಿ ವಿಧಿಯಂ ಮತ್ತೊಲ್ಲರೆಲ್ಲರ್ಮಹಾ ೮೮
ಗುರು ನೀನಾಗಿ ಲಘುತ್ವಮಾಂತೆ ನೆರೆಸರ್ವವ್ಯಾಪ್ತನಾಗೊಂದಕುಂ ೭೧
ಗೊಲ್ಲಾಳಂಗಿದಿರಾಗಿ ತೋರಿದೆ ಭವದ್ರೂಪಂ ಸಮಂಲಿಂಗನಂ ೫೭
ಘನರೋಗಾಚಲವಜ್ರಖಡ್ಗಪಟು ಚಿಂತಾರಣ್ಯದಾವಾನಲಾ ೧೧
ಘನಸರ್ವಜ್ಞತೆಯಲ್ಲಿ ನಿಸ್ತುಲ ಮಹದ್ಗಾಂಭೀರ್ಯದೊಳ್ನಿತ್ಯವ ೫
ಚಪಲಂ ಚರ್ಚಕನುಗ್ರಕೋಪಿ ಮಿಗೆ ಸುಳ್ಳಂ ಶಾಠ್ಯನುದ್ಧಂಭಕಂ ೨೪
ಜಗದಲ್ಲಾರಿಗು ನಿನ್ನನುಜ್ಞೆಯಲಿ ಬಪ್ಪಾವೇಷಗಳ್ಪೊತ್ತು ರೀ ೬೪
ಜಡಜೋದ್ಭೂತನ ನೆತ್ತಿಭುಕ್ತಿಯ ಕಪಾಲಂ ಸವ್ಯಹಸ್ತಾಗ್ರದೊ ೭೪
ಜಾತ್ಯಾಚಾರ ಜಯಾಭಿಯೋಗ ವಿಲಸಚ್ಚಾರೂಪ ಸಿದ್ಧಿಕ್ರಮಾ ೬೧
ತಡಮಾಡಲ್ತರಮಲ್ಲಮೆನ್ನ ಪೊರೆಯಯ್ಯಾ ನಿಶ್ಚಲಾರೋಗ್ಯಮಂ ೯೭
ತನುಕೋಶಂ ತನಗಿತ್ತೆಯಾಗಿ ಮಿಗೆ ಪಂಚಪ್ರಾಣಗಳ್ಸಾರ್ದವೆ ೩೩
ತನುವಂ ತಾಳಿದ ಮೂಲದಿಂ ಶಿವ ನಿನ್ನಂ ಪೂರ್ವದೊಳ್ಜನ್ಮದಿಂ ೧೭
ತಿಳಿಯಲ್ಬಾರದ ಮೇದರೂಪದ ಪುಳಿಂದ ಬ್ರಹ್ಮನೊಳ್ಕಾದಿ ಕೈ ೫೬
ತೃಣಮುಖ್ಯಾಬ್ಜಭವೇಂದ್ರ ಮೌನಿ ವರಸೃಷ್ಟಿಸ್ಥಾಪನಂಗೈದು ತ ೪೧
ತೊಗೆಯುಂಟಾದಡೆ ತುಪ್ಪಮೆಂಬ ನೆರೆತುಪ್ಪಂ ನೀಡಲೇನೀ ಬರೇ ೬೬
ದಯದಿಂ ನೀಡು ಕರಾವಲಂಬನವ ಶಂಭೋ ಭಕ್ತ ಪಾಪಾಪನೋ ೧೪
ದುಡ್ಡೇ ದೊಡ್ಡದು ಮಾನವರ್ಗೆ ನೆಲದೊಳ್ಸಂಸಾರಮಿರ್ದನ್ನೆಗಂ ೭೯
ದುರಿತಕ್ಕಂಜುತ ನೋತುಬಂದು ಚರಣಂಗಳ್ಗಾನತಂಗೈದು ಶಂ ೫೨
ದುರಿತಂಗೆಳ್ದಿರೆ ಬಾಧಿಸುತ್ತಲಿರೆ ನಿನ್ನಂ ಸಾರ್ದು ಕೈವಾರಿಸಲ್ ೪
ಧರೆಯಾಣ್ಮರ್ದಯಗೈಯುದಂದು ನೆರೆಯಾಧಿ ಪ್ರಾಪ್ತಿಯಪ್ಪಂದುಯಾ ೫೮
ನರನಾಗಾಮರ ಮುಖ್ಯ ಮೌನಿ ವಿನಮತ್ಪಾದಾಬ್ಜ ವಿಶ್ವೇಶ ನಿ ೩೯
ನರಬಾಣಪ್ರದ ನಿತ್ಯಪೂಜ್ಯಪರಮಾನಂದ ಪ್ರಮಾಪೂರ್ಣ ಸಾ ೨೧
ನಾಕಂ ದೈತ್ಯರಿಗಾಗಿ ನೋತು ಹರಿ ತಾಂ ನಾಳೀಕ ನಾಳಂತರಂ ೨೯
ನಾನಾಕಂಟಕ ಮೋಸವನ್ನು ಬಿಡಿಸುತ್ತಂ ಕಾಯ್ವುದೆನ್ನಿಂದ ಮೇಣ್ ೧೩
ನಿಜಕರ್ತೃತ್ವವು ನಿನ್ನೊಳಿಪ್ಪ ನೆವದಿಂ ವಿಕ್ಕಸ್ಯ ದೇವಾದಿ ನೀ ೯೦
ನೀನೇನಿತ್ತುದನುಂಡುಕೊಂಡು ಶಿವ ಸದ್ಭಾವಾರ್ಪಣತೃಪ್ತಿಯಿಂ ೮೦
ನೀಂ ಸರ್ವೋತ್ತಮನೆನ್ನಲೆಲ್ಲರು ಯಮಶೃಂಗಾಟಕಂ ಮೂಕನಂ ೮೫
ನೆಗಳಲ್ಬಲ್ಲೆನು ಬಿನ್ನಪಂಗಳೊಲವಿಂ ನೈಜಪ್ರಸಾದೋಪಭೋ ೯೫
ನೆಗೆಯಲ್ಪ್ಪಂಗು ಸಮುದ್ರಮಂದು ಮೃಗರಾಜಂ ಕುಂಜರಕ್ಕಂಜಿ ದಿ ೬೬
ನೆರೆಕಲ್ಯಾಣಮೊಡರ್ಚುವಲ್ಲಿ ಪತಿತಾರ್ತರ್ಗೆಲ್ಲಿ ದೀನರ್ಗೆ ಮೇ ೪೯

ನೆರೆ ತೋರಲ್ಕದು ಹೇತುವಾಗೆ ಕಡು ಸುಳ್ಳೆಂಬರ್ಸಮಸ್ತರ್ಜಗಂ ೨೬
ನೆರೆಯಂತಃಕರಣಂ ಮುರಾರಿ ಮನಮೇ ತಾರಾಧಿಪಂ ಬುದ್ಧಿವಾ ೮೨
ನೆಲಮೆಲ್ಲರ್ಗಚಲಾನುಭಾವತೆಯದುಂ ತೋರ್ಪುತ್ತೆ ನೀನೋರ್ವಬಲ್ ೬೨
ಪತಿತರ್ಪಾವನರಾಗುವಲ್ಲಿ ಪರಮಶ್ರೇಯಾಭಿವೃದ್ಧಿ ಸಂ ೩೦
ಪತಿತಾಗ್ರೇಸರನೆನ್ನ ಪಾವನಮೊಡರ್ಚಲ್ಕೀರ್ತಿ ಸರ್ವೋತ್ತಮಾ ೨೫
ಪರಮಪ್ರೀತಿಯೊಳನ್ನಪೂರ್ಣೆ ಭವದರ್ಧಾಂಗಿತ್ವಮಂ ತಾಳ್ದಿರಲ್ ೪೨
ಪುರಕಂದರ್ಪಯಮರ್ಗೆ ಭೀತಿ ಪುರುಹೂತಂಗಿಷ್ಟಸಂಪ್ರೀತಿಯೊಂ ೫೦
ಪೆಣಮಂ ಶೂಲದೊಳಿಟ್ಟು ನೀನು ಜಗದೊಳ್ಸಂಚಾರಮಂಗೈದಡೀ ೮೬
ಪೊಗಳಲ್ವೇದಗಳೆಲ್ಲ ನಾಣ್ಚಿ ಮಗುಳಿನ್ನುಂ ಬಲ್ಲರಾರ್ಕೀರ್ತಿಸಲ್ ೪೮
ಫಣಿಮುಖ್ಯಾಮರಲೋಕಪಾಲಕ ನರೇಶರ್ಗೆಲ್ಲ ನೀನೊರ್ವ ರ ೨೮
ಬಡವರ್ಬಲ್ಲಿದರಾಗುವಲ್ಲಿ ಬರಡಾದಾವೀದು ಪಾಲನ್ನೆಗಂ ೩೧
ಬಡಿಚೆಂಡಾಡುವನದ್ರಿರಾಶಿಯ ಸಮುದ್ರಂ ನೋಡುತೊಚ್ಚಾರೆಯಿಂ ೬೮
ಭುಜಶಾಖಾಳಿನಖಪ್ರಸೂನವಿಸರಂ ಭೂತ್ಯುಜ್ವಲಂ ಪುಷ್ಪಸ ೯೧
ಭುಜಸಾರಕ್ಕೆದುರಿಲ್ಲವಾಗೆ ಶಿವಕೈಲಾಸಾದ್ರಿಯುಂ ಕೀಳ್ಪಡಾ ೫೧
ಮತಮೇನಿರ್ದಡು ಬೇರೆಬೇರೆ ಮತಿಯಿಂದಸ್ವಾರ್ಥಸಂಧಾನಸಂ ೮೩
ಮನದೊಳ್ಚಿಂತಿಸೆ ನಿನ್ನ ರೂಪಮನಿಶಂ ಭಕ್ತಿಪ್ರಮಾಸಾಧುಸಾ ೪೬
ಮಂದೋಪದ್ರವಶೈಲವಜ್ರಗುರುಲತ್ತಾದೋಷ ಪದ್ಮಾಬ್ಜನೀ ೨೦
ಮಿಗೆ ಭೂತಾವಳಿ ನಿನ್ನ ಸೇವೆಗೆಯೊಡಂಬಟ್ಟಂದು ವೈಚಿತ್ರಮಾ ೬೩
ಮಿಗೆಯಾಳೋಚಿಸಿ ಮಂದನೊರ್ವಶಠನನ್ಯಂ ದುಷ್ಟನಿನ್ನುಂ ಪೆರಂ ೨೭
ಮುಡಿಯೊಳ್ಸೂಡಿದ ಪುಷ್ಪದಂತೆಯುಡುಸಂದೋಹಾಂ ಬಿದಿರ್ಚುತ್ತಿರಲ್ ೪೪
ಮುನ್ನೀಕಂಟಕಬಾಧೆಯುನ್ನು ಬಿಡಿಸಾರೋಗ್ಯಪ್ರಧಾನತ್ವದಿಂ ೧೨
ರಸವಾದಂಗಳು ಬಲ್ಲಡೇನು ನಯದಿಂ ರಾಜ್ಯಾವನಂ ಮಾಡಿ ಮಾ ೬
ವಿತ್ತಾಧೀಶನು ಸೇವೆಯಲ್ಲಿ ಇರಲಾಪ್ತಾಚಾರದಿಂ ಬಾಳ್ದಡ ೭೦
ವಿಧಿಮುಂತಾದ ಖುಷೀಂದ್ರಚಂದ್ರ ಪುರುಹೂತರ್ಕಿನ್ನರರ್ಕಾವ್ಯ ಸ ೬೦
ವಿವರಂದೋರದು ವೇದಗಳ್ಗೆ ಭವದೀಯಾನಂದ ವಸ್ತುಪ್ರಮಾ ೧೮
ವೃಷಭೋತ್ತುಂಗ ತುರಂಗ ರಂಗದಭಿಸಾರಂಗಾತ್ತ ಹಸ್ತಾಂಬುಜಾ ೫೫
ಶಬಲತ್ವಂ ನಿನಗಿಚ್ಛೆಯಾದ ನೆವದಿಂ ಶಕ್ತಿಪ್ರಭಾವೋಜ್ವಲಂ ೯೪
ಶರಣಾದೆಲ್ಲರು ಬಲ್ಲ ರೀತಿ ಶರಣೆನ್ನಲ್ಕೋರ್ವಭಕ್ತೋತ್ತಮಂ ೪೫
ಶರಣೆಂದಾನತನಪ್ಪೆ ನಿನ್ನ ಚರಣಾಂಭೋಜಾತ ಮುಸ್ಮನ್ಮನೋ ೩೮
ಶಿವನೇ ಕಾರಣವಸ್ತುವೆಂದು ತಿಳಿಯಲ್ಚಿದ್ರಾಜ್ಯ ಪಟ್ಟಾಭಿಷೇ ೧೦
ಶಿವಸರ್ವಾಧಿಕ ಸಿಂಧೂತೂಣ ಶಿಖಿದೃಕ್ಶೀತಾಚಲೇಂದ್ರಾತ್ಮಜೋ ೭೫
ಶಿವಸರ್ವಾತ್ಮ ಮಹಾನುಭಾವ ಗಿರಿಜಾಪ್ರಾಣೇಶ ನೀರೇಜಸಂ ೭

ಶುಭಸಾಮ್ರಾಜ್ಯಗಳೆಲ್ಲ ನಿನ್ನ ಪದಸೇವಾಕರ್ಮದಿಂ ಬಪ್ಪಡಾ ೯೬
ಶ್ರೀನಲ್ಲಿಂಗಿ ಸಮನ್ವಯಾಂಬುಧಿಕನಜ್ಜೈಲವಾತ್ರಕಂ ಶಂಕರ ೧೦೧
ಶ್ರೀಮತ್ಕಾಮಿತ ಸಿದ್ಧಿಗಾಗಿ ಮಿಗೆಯಾರೋಗ್ಯ ಪ್ರಮೋದಕ್ಕೆಬಲ್ ೯
ಶ್ರೀಮದ್ಭೂಜಲವಹ್ನಿವಾಯುರವಿಸೋಮದ್ವ್ಯಾತ್ಮಮೂರ್ತ್ಯಷ್ಟಕಂ ೧
ಶ್ರೀಮದ್ಭೂಮಿಭೃದೀಶ ಪುತ್ರಿವಿಲಸಚ್ಚಿತ್ತಾಂತಜಾತಭ್ರಮಾ ೧೦೦
ಶ್ರೀಮದ್ವಿಶ್ವವಿಭುತ್ವವಿನ್ನು ಮಿಗೆ ಸಾರಲಿನ್ನನಸ್ಥಿಮೃಜೋ ೪೭
ಷಡ್ವರ್ಗಾಚಲಜಂಭಭೇದಿ ವಿನಮತ್ಸಾಧುಪ್ರಮೋದಾಕರಾ ೯೩
ಸಕಲಾಮ್ನಾಯಗಳಶ್ವಮಾಗಲಗಮೇಂ ಕೊದಂಡಮೇಂ ಬಲ್ಮರಾಂ ೨
ಸಚ್ಚಿತ್ಕಾರಣ ಸತ್ವಮೂರ್ತಿಶರಣಾಗೆನ್ನೊಳ್ಕೃಪಾಸಿಂಧು ಭೂ ೧೫
ಸಹಿಸಲ್ಬಾರದ ಕಂಟಕಂಗಳೆಡರಿನ್ನುಂ ತಟ್ಟದೊಲ್ನೆಟ್ಟನೀ ೨೨
ಸಿರಿಸಿಂಗಾರವು ಸಿದ್ಧಿಸೀಮೆ ಶಿವ ನಿನ್ನಾರಾಧಿಸಲ್ಭಕ್ತಿಯಿಂ ೮೧
ಸುತೆಯಂ ಮೋಹಿಸಿ ಮಾವೆದಪ್ಪಿ ವಿಧಿ ಬೆನ್ನಟ್ಟಲ್ಮೃಗೀರೂಪಮಾಂ ೯೨
ಸುರಸಂಜೀವನ ಸುಪ್ರಮೇಯ ಸುಮನಸ್ಸಂಕೀರ್ತನಂ ಪ್ರಿಯ್ಯಸಾಂ ೭೨
ಸೂತಾದ್ಯಾಖಿಲಮಾನಿಶೌನಕಮನೋಸೌಜನ್ಯವೃತ್ತಿಪ್ರಿಯಾ ೯೮
ಸ್ವಭೂರ್ಜಜಂ ಸುರಧೇನುಮುಖ್ಯವರಚಿಂತಾರತ್ನಗಳ್ನಿನ್ನಭ ೮೯

# ಕಠಿನಶಬ್ದಕೋಶ

## ಬಸವಶತಕ

( ಇಲ್ಲಿಯ ಸಂಖ್ಯೆಗಳು ಪದ್ಯಗಳನ್ನು ಸೂಚಿಸುತ್ತವೆ )

### ಅ

ಅಘ—ಪಾಪ ೮೨
ಅಚ್ಚು—ಅಕ್ಷ (ತ್ಸ) ಬಂಡಿಗಳ ಎರಡು ಗಾಲಿಗಳನ್ನು ಜೋಡಿಸುವ ಭಾಗ ೬೬
ಅಂಚಿತ—ಮಣಿದ ೨೮
ಅಂಜನ—ಕಾಡಿಗೆ ೨೯
ಅಟ್ಟುಳಿಗೆ—ಕಾಟ, ಪೀಡೆ ೩೨
ಅಣಗು—ಅಡಗು ೯೩
ಅನಾಮಯ—ಶುದ್ಧ, ಸುಂದರ ೯೯
ಅನುಗೈ—ಅನುಕೂಲ ಮಾಡಿಕೊಡು ೪
ಅನುಭೂತಿ—ಅನುಭವಿಸುವಿಕೆ ೨
ಅನೂನ—ಕೊರತೆಯಿಲ್ಲದ, ಸಂಪೂರ್ಣ ೩
ಅಪರಾಂಬುಧಿ—ಪಶ್ಚಿಮ ಸಮುದ್ರ ೨೦
ಅಪಹ—ನಾಶಮಾಡುವ ೬೧
ಅಪಾಂಗ—ಕಡೆಗಣ್ಣು ೯೬
ಅಬ್ಜ—ಕಮಲ ೪೫
ಅಬ್ಧಿ—ಸಮುದ್ರ ೩೫
ಅಭ್ಯಂಕಿತ—ಕೂಡಿದ ೧೫
ಅರೆ—ತಾಳವೋಲೆ ೪
ಅರ್ಕ—ಸೂರ್ಯ ೪೫
ಅವಿರಳ—ಕೂಡಿಕೊಂಡ ೮೨
ಅಶ್ಮ—ಕಲ್ಲು ೪೯
ಅಸು—ಜೀವ ೮, ೧೯

### ಆ

ಆಢ್ಯ—ಶ್ರೀಮಂತ ೯೬
ಆನ್—ಹೊಂದು, ಧರಿಸು ೭೮
ಆರುವಿಚಾರ—ಷಟ್‌ಸ್ಥಳ ವಿಚಾರ ೫೫
ಆರ್ತ—ಪೀಡಿತ, ಸಂಕಟಕ್ಕೆ ಸಿಲುಕಿದ ೧೨
ಆಸ್ಯ—ಮುಖ ೪೪

### ಇ

ಇಷ್ಟ—ಇಷ್ಟಲಿಂಗ ೨೪
ಇಂಗಿತ—ಉದ್ದೇಶ, ಅಭಿಪ್ರಾಯ ೭೫, ೯೬

### ಈ

ಈಪ್ಸಿತ—ಬಯಸಿದ ೪೦
ಈಸರ—ಈಶ್ವರ (ತ್ಸ), ಶಿವ ೨೨, ೮೨

### ಉ

ಉತ್ಪಲ—ನೀಲಕಮಲ ೫೭
ಉಪರತಿ—ವೈರಾಗ್ಯ ೧೦೦
ಉರೆ—ಚೆನ್ನಾಗಿ ೮

ಉಲ್ಬಣ—ಹೆಚ್ಚಳ ೩೭, ೭೭
ಉಳ್ಳಿ—ಈರುಳ್ಳಿ ೬೫

**ಊ**

ಊಣೆಯ—ಊನ (ತ್ಸ), ಕೊರತೆ ೧೮

**ಎ**

ಎಣ್ದೆಸೆ—ಎಂಟು ದಿಕ್ಕು ೯೦

**ಏ**

ಏಂ—ಏನು ೧೬, ೫೨

**ಐ**

ಐದು—ಹೋಗು ೭
ಐದೆ—ಗಂಡನುಳ್ಳವಳು, ಮುತ್ತೈದೆ ೮

**ಒ**

ಒಡರ್ಚು—ಮಾಡು ೧೦
ಒಬ್ಬುಳಿ—ರಾಶಿ, ಒಟ್ಟು ೪೯

**ಓ**

ಓಜ—ಕಮ್ಮಾರ, ಅಕ್ಕಸಾಲಿಗ ೪೩, ೯೦
ಓಜೆ—ಔಚಿತ್ಯ, ರೀತಿ ೨೦
ಓಪ—ಯಜಮಾನ, ಒಡೆಯ ೧೬

**ಕ**

ಕಚ—ತಲೆಗೂದಲು ೨೯
ಕನಕ—ಬಂಗಾರ ೩೯
ಕಮನೀಯ—ಚೆಲುವಾದ ೪೪
ಕಮಲಾಹಿತ—ಚಂದ್ರ ೩೭
ಕರಂಡ—ಪೆಟ್ಟಿಗೆ, ಸಂಪುಟ ೫೩
ಕರ್ಕಶ—ಒರಟು ೧೨
ಕಲಾಪ—ಆಭರಣ ೩೭
ಕಲ್ಪಭೂಜ—ಕಲ್ಪವೃಕ್ಷ ೨೮
ಕಲ್ಪಪರತ್ವ—ಯುಗ ಯುಗಾಂತರ ೯೬
ಕಾದ—ಹಾವು ೩೭
ಕಾಮುಕ—ಅಪೇಕ್ಷಿಸಿದವ ೩೪
ಕಿಂಕರ—ಸೇವಕ ೪೧
ಕಿರುಕುಳ—ಸಾಮಾನ್ಯ, ಅಲ್ಪ ೮೫
ಕುಠಾರ—ಕೊಡಲಿ ೫೪
ಕೃತಾಂತ—ಯಮ ೫, ೭೭
ಕೊಪ್ಪರಿಗೆ—ಕಡಾಯಿ ೪೩
ಕ್ಷುತ್—ಹಸಿವೆ ೪೦

**ಗ**

ಗುಣ—ಸತ್ವ, ರಜ, ತಮ ಮೂರು ಮೂಲಗುಣಗಳು ೭೮
ಗೃಹ—ಬೊಕ್ಕಸ ೨೫
ಗೇಹ—ಮನೆ ೭೩
ಗೊತ್ತು—ಗುರಿ, ನೆಲೆ ೬೨
ಗೋಪ—ಎತ್ತು ೮೩
ಗೋಪಿತ—ರಹಸ್ಯ ೫೩

**ಘ**

ಘಂಟಾಪಥ—ರಾಜಮಾರ್ಗ ೫೩

**ಚ**

ಚಂದ್ರಿಕಾ—ಬೆಳುದಿಂಗಳು ೧
ಚರ—ಜಂಗಮ ೯
ಚರಭಾವ—ಜಂಗಮಭಾವ ೭
ಚರಾರ್ಚನೆ—ಜಂಗಮಾರ್ಚನೆ ೬
ಚಾರು—ಮನೋಹರ, ಸುಂದರ ೨೯
ಚಿತ್ಕಲಾಕರ—ಜ್ಞಾನಕಲಾಕರ ೯೧
ಚಿತ್ಪ್ರಕರಣ—ಜ್ಞಾನಪ್ರಕರಣ ೨
ಚಿತ್‌ಪ್ರಸಾದ—ಜಂಗಮಪ್ರಸಾದ ೧೫
ಚಿದ್ಧನ—ಜ್ಞಾನವೆಂಬ ಧನ ೫೮

ಚೂರ್ಣ—ಸುಡು ೧೬
ಚೂಡಾಮಣಿ—ತಲೆಯ ಆಭರಣ, ಮುಡಿಮಣಿ ೧

**ಜ**

ಜಡನಿಧಿ—ಸಮುದ್ರ ೩೩
ಜಲಜ—ಕಮಲ ೬೪
ಜಲಜಭವಾಂಡ—ಬ್ರಹ್ಮಾಂಡ ೬೪
ಜವ—ಬೇಗ ೭೧
ಜಾಗು—ಮೌನ ೩೮, ೨೬
ಜೈನಭೂಪಗೃಹ—ಬಿಜ್ಜಳನ ಭಾಂಡಾರ ೨೫

**ಡ**

ಡಂಗುರಂಬೊಯ್ಯು—ಡಂಗುರವನ್ನು ಹೊಡೆಸು ೫೬

**ತ**

ತನುವಿಡು—ಸಾಯಿ ೨೨
ತರಣಾ—ಡೋಣಿ, ದಾಟುವಿಕೆ ೮೪
ತಳ್ಳಿ—ತಂಟೆ ೬೮
ತಾಮಸ—ಅಜ್ಞಾನ ೩೧
ತಾರಕಮಂತ್ರ—ದಾಟಿಸುವ ಮಂತ್ರ ೫೪
ತಿಟ್ಟಿ—ಬಯ್ಗಳು ೬೬
ತಿಮಿರ—ಕತ್ತಲೆ ೩೦
ತ್ರಿವಿಧಾರ್ಪಣೆ—ಗುರು, ಲಿಂಗ, ಜಂಗಮರಿಗೆ, ತನು ಮನ, ಧನಗಳ ಅರ್ಪಣೆ ೮೦
ತುಂಗ—ಉನ್ನತ, ವಿಕಾರ ೧೩
ತುಳಿಲ್—ನಮಸ್ಕಾರ ೨೬
ತೂಗದೆ—ಸ್ಥಿರವಾಗಿ ೨

**ದ**

ದಂಡಧಾರ—ಯಮ ೫೩
ದಂಡಭೃತ್—ಯಮ ೩೦
ದಲ್ಲು—ಸೈನ್ಯ ೬೫
ದಾಸೋಹ—ನಾನು ದೇವರಭಕ್ತನೆಂದು ಮಾಡುವ ಸೇವೆ ೭೩
ದುರುಳೋಕ್ತಿ—ಕೆಟ್ಟಮಾತು ೧೧
ದೈವಕ—ದೈವಕ್ಕೆಸಂಬಂಧಿಸಿದ, ದೈವಾಧೀನವಾದ ೮

**ಧ**

ಧವ—ಗಂಡ ೭೧
ಧಾರುಣಿ—ಭೂಮಿ ೧೦
ಧೀ—ಬುದ್ಧಿ, ಜ್ಞಾನ ೬೮

**ನ**

ನತ—ನಮಸ್ಕರಿಸಿದ ೪೨
ನರುಗಂಪು—ಸುವಾಸನೆ ೬೮
ನಿಗಮ—ವೇದ ೧೨
ನಿರಸ್ತ—ಹೋಗಲಾಡಿಸಿದ ೫೯, ೭೩
ನಿರುಪಾಧಿಕ—ಚಿಂತೆಯಿಲ್ಲದಿರುವಿಕೆ ೭೨
ನಿರ್ಜರ—ದೇವತೆ ೭೨
ನಿರ್ವಾಪಣ—ದೂರಮಾಡು, ನಾಶಮಾಡು ೧೬
ನಿರ್ವ್ಯಾಜ—ಕಾರಣವಿಲ್ಲದ ೨೧
ನಿರ್ವಿಕಲ್ಪ—ಇದ್ದಂತೆಇರುವ, ಬದಲಾವಣೆ ಹೊಂದದ ೭೨
ನಿಷ್ಕ—ಬಂಗಾರ, ಬಂಗಾರದ ಒಂದು ನಾಣ್ಯ ೫೭
ನಿಸ್ತುಲ—ಹೋಲಿಕೆ ಇಲ್ಲದ ೪೫
ನಿಸ್ಪೃಹ—ಸ್ವಾರ್ಥವಿಲ್ಲದ ೭೨
ನೀಲಾಕ್ಷಿ—ನೀಲಾಂಬಿಕೆ, ಬಸವಣ್ಣನವರ ಹೆಂಡತಿ ೨೭

ನೆಗಳ್–ಮಾಡು ೪೮, ೪೯
ನೆರವು–ಸಹಾಯ, ನೆರವೇರಿಸುವಿಕೆ ೩
ನೆರಹು–ಸೇರಿಸು, ಕೂಡಿಸು ೧೩
ನೇರಿಸು–ಸೇರಿಸು, ಕೂಡಿಸು ೮೯
ನೇಹ–ಸ್ನೇಹ (ತ್ಸ), ಪ್ರೀತಿ, ಗೆಳೆತನ ೭೩
ನೊರಜು–ಕೆಲಸಕ್ಕೆ ಬಾರದುದು, ಗಾಳಿಯಲ್ಲಿ ತೂರಿ ಹೋಗುವ ಹುಳು ೯೨

## ಪ

ಪಚಾರ–ನಿಂದೆ, ಚುಚ್ಚುಮಾತು ೫೬
ಪಟ್ಟು–ಹಟ ೮೩
ಪತಂಗ–ಸೂರ್ಯ ೫೯
ಪತಿತ–ಪಾಪಿ, ಕೆಳಗೆಬಿದ್ದ ೩೧
ಪತ್ತನ–ಪಟ್ಟಣ ೧೦, ೪೦
ಪಯೋಜ–ಕಮಲ ೨೮
ಪಯೋಧಿ–ಸಮುದ್ರ ೧
ಪಯೋನಿಧಿ–ಸಮುದ್ರ ೫೧, ೬೨
ಪರಪ್ರಕೃಷ್ಟ–ಶ್ರೇಷ್ಠ ೨೪
ಪರಾತ್ಪರ–ಶ್ರೇಷ್ಠತಮ ೮೦, ೮೭
ಪಲ್ಲವ–ವಿಟ ೧೭
ಪಾಟಿಸು–ಮೀರು, ಭೇದಿಸು ೫೩
ಪಾರಗ–ದಾಟುವವ ೮೮
ಪಾವು–ಹಾವು ೧೦
ಪಾರ್ಥ–ಅರ್ಜುನ ೬೯
ಪಾಂಶು–ಧೂಳು ೭೮
ಪೀತೆ–ಮೊದಲು, ಹಿಂದೆ ೪೩
ಪುಂಗವ–ಶ್ರೇಷ್ಠಪುರುಷ ೧೩
ಪುಂಜ–ಸಮೂಹ, ರಾಸಿ ೫೪
ಪೂತ–ಚೊಕ್ಕವಾದ ೩೯
ಪ್ರದಾಸ್ಯ–ದಾಸೋಹ (?) ೭೬
ಪ್ರಸರ–ಪ್ರೀತಿ ೯೦

## ಬ

ಬಡಿವಾರ–ಒಣಹೆಮ್ಮೆ, ಜಂಭ ೯೨
ಬಲ್ಪೇರದ–ಪ್ರಗತಿಯಾಗದ ೬೬
ಬರಸೆಳೆ–ಆಲಿಂಗಿಸು ೯
ಬೀಜ–ಕಾರಣ ೨೫
ಬೆಜ್ಜ–ತೂತು ೪೯
ಬೆಸುಕಿ–ಬೆಸುಗೆಹಾಕಿದ ೯೦
ಬೇಟ–ಪ್ರೇಮ ೮೨
ಬೊಮ್ಮ–ಬ್ರಹ್ಮ ೩೪

## ಭ

ಭರಣಾ–ಕಾಪಾಡುವವ, ತುಂಬಿಕೊಡುವವ ೭, ೮
ಭರ್ಜಿತ–ನಾಶಮಾಡಿದ ೬೩
ಭವದೀಯ–ನಿನ್ನ, ನಿನ್ನ ಸಂಬಂಧ ೭೯
ಭವಿಪ್ರಸಕ್ತಿ–ಭವಿಯಲ್ಲಿ ಆಸಕ್ತಿ ೧೭
ಭಾಷ್ಯ–ವಚನ ೫೫
ಭುಜಂಗ–ಹಾವು ೧೧
ಭೂಜ–ಗಿಡ ೫೪
ಭೂರಿ–ಬಹಳ, ದೊಡ್ಡ ೧೪
ಭೂಸುರ–ಬ್ರಾಹ್ಮಣ ೨೨

## ಮ

ಮಂಜರಿ–ಗೊಂಚಲು ೨೯
ಮಣಿ–ರತ್ನ ೨೧
ಮಂತ್ರಿಶೇಖರ–ಮಂತ್ರಿಶ್ರೇಷ್ಠ ೫೨
ಮರುತ್–ಗಾಳಿ ೯೧
ಮರುದಿಂದ್ರಿಯ–ಮೂಗು ೯೧
ಮರ್ಚಿಸು–ಮೆಚ್ಚಿಸು ೬೩
ಮಲ್ಲಿಕಾ–ಮಲ್ಲಿಗೆ (ವೃ) ೨೯
ಮಹಿತ–ಶ್ರೇಷ್ಠ ೫೫
ಮಹೀಜ–ಮರ ೫೭
ಮಹೀಶ–ರಾಜ ೪೨

ಮಹೀಸುರ—ಬ್ರಾಹ್ಮಣ ೫೨
ಮಾಚು—ಬಿಡು, ವಂಚಿಸು ೪೩
ಮಾಣಿಸು—ತೊಲಗಿಸು ೯೦
ಮಾರಭಿತ್ಪಾದ—ಶಿವಪಾದ ೩೭
ಮಾರಭಿನ್ಮತ—ಶಿವಮತ ೧
ಮಿಸುನಿ—ಬಂಗಾರ ೮೯
ಮುಖ—ಮೊದಲಾದ ೫೩
ಮೇದಿನಿ—ಭೂಮಿ ೬೩

**ರ**

ರಕ್ಷಾಮಣಿ—ತಾಯಿತ, ಕಾಪಾಡುವ ಮಣಿ ೩೧
ರಜತ ಬೆಳ್ಳಿ ೭೩
ರಾಜ—ಚಂದ್ರ ೨೮
ರಾಜಿ—ಸಮೂಹ, ಗುಂಪು ೨೧

**ಲ**

ಲಾಗು—ಧಾನ್ಯಗಳನ್ನು ಸಾಲ ಕೊಡುವುದು ೬೮
ಲುಲ್ಲು—ರುಳಿ, ಗೆಜ್ಜೆಗಳುಳ್ಳ ಬೆಳ್ಳಿಯ ಸರಪಳಿ ೬೮
ಲೆಂಕ—ಸೇವಕ, ಭಕ್ತ ೪೧
ಲೋಗರು—ಸಾಮಾನ್ಯ ಜನರು ೫೨

**ವ**

ವರ್ಣ—ಕೀರ್ತಿ, ಹೊಳಪು ೯೯
ವಾಯುಭುಕ್ತಲ್ಪ—ಹಾವಿನ ಹಾಸಿಗೆ ೯೫
ವಾರ—ಸಮೂಹ ೯೫
ವಾಹಿನಿ—ಹೊಳೆ ೩೩
ವಿಕಾಸ—ಅರಳುವಿಕೆ ೪೫
ವಿಗ್ರಹ—ದೇಹ ೧೫, ೨೫
ವಿತತ—ವಿಸ್ತಾರ ೫೪, ೬೦
ವಿಭಂಜನ—ನಾಶಮಾಡುವ ೩೦
ವಿಭಾವನ—ಜ್ಞಾನ, ಕಲ್ಪನೆ ೭೫
ವಿಭೂತಿ—ಮಹಾಪುರುಷ, ಐಶ್ವರ್ಯ ೨೧
ವೇತ್ರ—ದಂಡ ೮೩

**ಶ**

ಶಮೆ—ಇಂದ್ರಿಯಗಳ ನಿಗ್ರಹ ೩೦
ಶಶಾಂಕ—ಚಂದ್ರ ೭೪
ಶಿರೋಮಣಿ—ತಲೆಯಲ್ಲಿ ಧರಿಸುವ ರತ್ನ ೭೮
ಶೀತಕಿರಣ—ಚಂದ್ರ ೫
ಶುಷ್ಕ—ಒಣಗಿದ, ಕೆಲಸಕ್ಕೆಬಾರದ ೫೭
ಶೇಮುಷೀ—ಬುದ್ಧಿ ೭೩
ಶ್ರಿತ—ಆಶ್ರಯ ಹೊಂದಿದ ೨೮

**ಸ**

ಸಂಕರ—ಕೂಡಿಕೆ, ಸೇರಿಕೆ ೯೧
ಸಂಚಿತ—ಪೂರ್ವಜನ್ಮದ ಪುಣ್ಯ—ಪಾಪಗಳ ಪರಿಣಾಮ ೫೮
ಸತ್ವರ—ತೀವ್ರ, ಚೆಚ್ಚರ (ದ್ಭ) ೩೮
ಸಪರ್ಯ—ಸೇವೆ ೨೨, ೮೦
ಸಮೀರ—ಗಾಳಿ ೫೯
ಸಾಟಿ—ಸಮಾನ ೬೮
ಸಾದನೆ—(ಸಾದನ)—ಮನೆ ೩೬
ಸಾದರ—ಗೌರವ ಮತ್ತು ಪ್ರೇಮದಿಂದ ಕೂಡಿದ ೧೪
ಸಾರಸಮಿತ್ರ—ಸೂರ್ಯ ೨೦
ಸಿಂಗ—ಸಿಂಹ ೯೩
ಸಿತಕರ—ಚಂದ್ರ ೫೧
ಸಿಂಧು—ಸಮುದ್ರ ೫
ಸಿಂಧುಜ—ಚಂದ್ರ ೮೧
ಸಿಂಧುಜಮೌಳಿ—ಶಿವ ೮೧
ಸುಕ್ಕು—ಕುಗ್ಗು ೨೧
ಸುಮಾಸ್ತ್ರ—ಮನ್ಮಥ ೫
ಸುವರ್ಣ—ಬಂಗಾರ ೩೯, ೭೩
ಸೂರ—ಸೂರ್ಯ ೨೦
ಸೊಮ್ಮು—ಸಂಪತ್ತು ೩೮
ಸ್ತೋಮ—ಗುಂಪು, ರಾಸಿ ೪೪

## ಭುವನೈಕನಾಯಕೀಶತಕ

( ಇಲ್ಲಿಯ ಸಂಖ್ಯೆಗಳು ಪದ್ಯಗಳನ್ನು ಸೂಚಿಸುತ್ತವೆ )

### ಅ

ಅಗವರಜಾ—ಪಾರ್ವತಿ ೮೨
ಅಂಗಜ—ಮನ್ಮಥ ೧೧, ೯೮
ಅಚಲಜಾ—ಪಾರ್ವತಿ ೮೯
ಅಂಚಿತ—ಹೊಳೆಯುವ ೮೬
ಅಧ್ವರ—ಯಜ್ಞ ೩೭, ೩೮
ಅನಂಗ—ಕಾಮ ೭೩
ಅನನ್ಯಜ—ಕಾಮ ೪೬
ಅನಂತಸಿಂಧು—ದೇವಗಂಗೆ ೨೭
ಅನೂನ—ಕೊರತೆಯಿಲ್ಲದ,
ಸಂಪೂರ್ಣ ೬೭
ಅಪರ್ಣೆ—ಪಾರ್ವತಿ ೭೦
ಅಬ್ಜ—ಕಮಲ ೫
ಅಬ್ಧಿ—ಸಮುದ್ರ ೩೦
ಅಂಬರ—ಆಕಾಶ ೯೩
ಅಂಬುದ—ಮೋಡ ೧೪
ಅಯೋಗ—ಅಗಲಿಕೆ ೮೩
ಅರ್ಕಸಂಭವೆ—ಯಮುನಾನದಿ ೨೭
ಅವಗಾಹನ—ಸ್ನಾನ, ಮುಳುಗುವಿಕೆ ೨೭
ಅವರಜಾ—ಗಣಪತಿ ೮೨
ಅಸಿತಪರ್ವತ—ಅಂಜನಾದ್ರಿ,
ಕಾಡಿಗೆಯ ಬೆಟ್ಟ ೭೬
ಅಸ್ಥಿಮಾಲಿಕೆ—ರುಂಡಮಾಲೆ ೧೦

### ಆ

ಆಖಂಡಲ—ಇಂದ್ರ ೭
ಆಜಿಚತ್ವರ—ಯುದ್ಧರಂಗ ೩೮
ಆಮಯ—ರೋಗ ೨
ಆರಡಿ—ಭ್ರಮರ ೫೯,೬೯
ಆರಭಿ—ಒಂದು ರಾಗದ ಹೆಸರು ೨೩
ಆರ್ಜವ—ಸರಳತನ,ನಮ್ರತೆ ೬೭
ಆಲಂಭ—ಯಜ್ಞದಲ್ಲಿ ಪಶುಗಳನ್ನು
ಕೊಲ್ಲುವುದು ೩೮
ಆಲವಾಲ—ಪಾತೆ ೯೨
ಆಶುಗ—ಗಾಳಿ ೨೧
ಆಶುಗಭುಗಾಹಿತ—ಗರುಡ ೭

### ಇ

ಇಧ್ಮ—ಕುಬೇರನ ಒಂದು ನಿಧಿ ೭೫
ಇಂದ್ರಜಾಲ—ಮಾಟ ಮದ್ದುಗಳ
ವಿದ್ಯೆ, ಮೋಸ ೫೬

### ಈ

ಈಕ್ಷಣ—ನೋಡುವಿಕೆ ೩
ಈಪ್ಸಿತ—ಬಯಕೆ ೧೫

### ಉ

ಉಡುಪಂಕ್ತಿ—ನಕ್ಷತ್ರಗಳ ಸಾಲು ೬೨
ಉತ್ಕರ—ಸಮೂಹ ೩೪

ಉತ್ತರ–ಉತ್ತರದಿಕ್ಕು, ಬಹಿಷ್ಕಾರ ೩೩, ೮೦
ಉತ್ತರಶೈಲ–ಹಿಮಾಲಯ ೧೦೦
ಉದ್ಧೃತ–ಎತ್ತಲ್ಪಟ್ಟ ೯೨
ಉನ್ಮೀಲನ–ಅರಳುವಿಕೆ, ತೆರೆಯುವಿಕೆ ೪೯
ಉಪೇಂದ್ರ–ವಿಷ್ಣು, ಕೃಷ್ಣ ೬

ಒ

ಒಪ್ಪಿಡಿ–ಒಂದು ಹಿಡಿ ೭೮

ಓ

ಓಲದ–ಸರಿಹೋಗದ ೭೧
ಓಷ್ಠ–ತುಟಿ ೧೪
ಓಸರಿಸು–ಓರೆಯಾಗು ೭೭

ಕ

ಕಚ–ಕೂದಲು ೨೧
ಕಚ್ಛಪ–ಕುಬೇರನ ಒಂದು ನಿಧಿ, ಆಮೆ ೭೫
ಕಂಚುಕ–ಕುಪ್ಪಸ ೫೧
ಕಂಜಮಿತ್ರ–ಸೂರ್ಯ ೨೦
ಕಟಕ–ಕಡಗ ೬೬
ಕಟಾಕ್ಷ–ಕಡೆಗಣ್ಣು ೩
ಕಟಿ–ಟೊಂಕ ೯೪
ಕನಿಷ್ಠ–ಕಿರುಬೆರಳು ೮೦
ಕಂದುಕ–ಚೆಂಡು ೬೫
ಕಂಧರ–ಕುತ್ತಿಗೆ ೫೧
ಕರಭ–ಮಣಿಕಟ್ಟಿನಿಂದ ಕಿರುಬೆರಳಿನ ವರೆಗಿನ ಅಂಗೈಯ ಬದಿ ೮೦
ಕರೀರ–ಕೊಡ ೮೮
ಕರೇಣು–ಹೆಣ್ಣಾನೆ ೩೩
ಕರೋರುಹ–ಬೆರಳು ೯೨
ಕಳೇಬರ–ದೇಹ ೧೮
ಕಾಂಚನ–ಸಂಪಗೆ ೮೬, ೯೮
ಕಾಟ್ಯ–ಬಂಡೆ ೭೭
ಕಾಂಡ–ವಜ್ರ ೭
ಕಾಯು–ಸಿಟ್ಟು ೫೫
ಕಾರಿಜವ್ – ? ೪೩
ಕಾರೊಡಲ–ವಿಷ್ಣು, ಕೃಷ್ಣ ೩೧
ಕಾಳೋರಗ–ಕಾಳಸರ್ಪ ೫೫
ಕಿಂಕಿಣಿ–ಸಣ್ಣ ಗೆಜ್ಜೆ ೭೪
ಕಿಡಿಗಣ್ಣ–ರುದ್ರ ೩೧
ಕಿಸಲಯ–ಚಿಗುರು, ತಳಿರು ೨೫
ಕೀಲಾಲ–ನೀರು, ಅಮೃತ ೪೯
ಕುಂದ ಮಲ್ಲಿಗೆಮೊಗ್ಗು ೬೫,೭೫
ಕುಮುದ್ವತೀರಮಣ–ಚಂದ್ರ ೧೯
ಕುಂಭಿನಿ–ಭೂಮಿ ೨೩,೩೮
ಕುರಂಜನ–ಒಂದು ರಾಗದ ಹೆಸರು ೨೩
ಕುಶೇಶಯ–ಕಮಲ ೫
ಕೃಪೀಟ–ನೀರು ೭೯
ಕೆಂಡಕಟಾಹ–ಅಗ್ನಿಕುಂಡ ೭
ಕೈತವ–ಮೋಸ ೬೬
ಕೈರವಾಪ್ತ–ಚಂದ್ರ ೨೫
ಕೋಕ–ಚಕ್ರವಾಕ ೭೭
ಕೋಟೀರ–ಕಿರೀಟ ೭೬
ಕೌಮುದಿ–ಬೆಳುದಿಂಗಳು ೪೫

ಗ

ಗುಚ್ಛ–ಗೊಂಚಲು, ಕುಚ್ಚು ೭೦
ಗುಲ್ಫ–ಪಾದದ ಹರಡು ೯೬
ಗೇಹ–ಮನೆ ೮೯, ೯೯
ಗೋಪನ–ಗುಪ್ತ ೬೫

ಚ

ಚಂಚರೀಕ–ದುಂಬಿ ೭೧
ಚಂಡಿಕೆ–ಪಾರ್ವತಿ ೭

ಚಾಪ—ಬಿಲ್ಲು ೬೫
ಚಾರು—ಸುಂದರ ೧೪
ಚುರ್ಚು—ಸುಡು ೪೬

**ಜ**

ಜಡರಾಶಿ—ನೀರು, ಸಮುದ್ರ, ಮೂಢತನ ೨೯
ಜರಾ—ಮುಪ್ಪು ೪೦
ಜಾನು—ಮೊಳಕಾಲು ೯೭
ಜೇಷ್ಠಳು—ದರಿದ್ರಲಕ್ಷ್ಮಿ ೧೧

**ತ**

ತಟಿತ್—ಮಿಂಚು ೩
ತತ—ವಿಸ್ತಾರವಾದ ೧೦೦
ತಲೆಯೋಡು—ಕಪಾಲ, ತಲೆ ಬುರುಡೆ ೧೦
ತಸ್ಥ—ಅಲ್ಲಿರುವ ೯೧
ತಾಟಂಕ—ಕಿವಿಯ ಆಭರಣ ೮೩
ತಾತೆ — ? ೮೧
ತಾಮರಸ—ತಾವರೆ ೬೯
ತಾರಕಾಪತಿ—ಚಂದ್ರ ೬೨
ತಿಲಪುಷ್ಪ—ಎಳ್ಳಿನಹೂ ೯೯
ತುಂಡ—ಕೊಕ್ಕು ೭
ತುಮುಲಾ—ಯುದ್ಧ ೮೨
ತೂಗು—ಸಮಾನವಾಗು ೧೯

**ದ**

ದಕ್ಷಿಣಾಸೆ—ದಕ್ಷಿಣದಿಕ್ಕು, ದಾನದ ಆಸೆ ೩೨
ದನುಜಾಂಧ—ಅಂಧಕಾಸುರ ೪೯
ದರತ್ವ—ಶಂಖ ೧೪
ದಳಿತ—ಒಡೆದ, ಮರ್ದಿಸಲ್ಪಟ್ಟ ೧೭
ದಾನ—ಆನೆಯ ಮದಜಲ, ಕೊಡುವಿಕೆ ೩೬
ದಾನವ—ರಾಕ್ಷಸ ೧೩
ದಾನವಾರಿ—ಕೃಷ್ಣ ೩೨
ದಾನಿ—ಆನೆ, ಕೊಡುವವ ೩೬
ದಿಕ್ಸಾಮಜ—ದಿಕ್ಕಿನ ಆನೆ ೩೨
ದಿಗೀಶ—ದಿಕ್ಪತಿ ೬
ದಿನೇಂದ್ರ—ಸೂರ್ಯ ೬
ದಿವ್ಯಸಂತಾನ—ಕಲ್ಪವೃಕ್ಷ ೮
ದೇಸಿಕೆ—ಗುರು ೨೪
ದೊಂಗಡ—ಜಂಜಾಟ—? ೩೦
ದ್ವಿಜ—ನಕ್ಷತ್ರ, ಹಲ್ಲು ೬೨, ೧೦೦

**ಧ**

ಧನದಾಸೆ—ಕುಬೇರನ ದಿಕ್ಕು, ಉತ್ತರದಿಕ್ಕು, ಹಣದಾಸೆ ೩೩
ಧೃತ—ಧರಿಸಿದ ೧೭

**ನ**

ನಖ—ಉಗುರು ೬೨
ನಾಗಕಲಾಪ—ಶಿವ ೩೫
ನಾಟಿ—ಒಂದು ರಾಗದ ಹೆಸರು ೨೩
ನಾರಿ—ಭ್ರಮರ, ಬಿಲ್ಲಿನ ಹೆದೆ ೫೬, ೬೭
ನಾಳೀಕಭವಾಂಡ—ಬ್ರಹ್ಮಾಂಡ ೧೨
ನಿಚಯ—ಸಮೂಹ ೮೭
ನಿಟಿಲ—ಹಣೆ ೯೮
ನಿರಸ್ತ—ಹೋಗಲಾಡಿಸಿದ, ಹರಡಿದ ೨೨, ೨೩
ನಿಷ್ಕರೇಣು—ಅಣುಮಾತ್ರವಿಲ್ಲ ೩೩
ನಿಸ್ತಂದ್ರ—ಜಾಗರೂಕ ೬

**ಪ**

ಪಂಕ—ಕೆಸರು, ಪಾಪ ೨೯
ಪಕ್ಷಗನಾಯಕ—ವಿಷ್ಣು ೫೯
ಪಂಚತೆ—ಸಾವು ೩೯

ಪಂಚವಕ್ತ್ರ–ಶಿವ, ಸಿಂಹ ೩೫
ಪಂಚಾನನ–ಶಿವ, ಸಿಂಹ ೨೮
ಪಟಲ–ಸಮೂಹ ೧೯
ಪಟೀಯ–ಶ್ರೇಷ್ಠ ೨೦
ಪತಿತನಂ–ಪಾಪಿಯನ್ನು, ಗಂಡನ
ತನವನ್ನು, ಪತಿತ್ವವನ್ನು ೬೩
ಪದ್ಮಕೋಶ–ಕಮಲದ ಮೊಗ್ಗೆ ೮೮
ಪದ್ಮಿ–ಆನೆ, ವಿಷ್ಣು ೩೬
ಪಯೋಧರ–ಮೋಡ, ಕುಚ ೧
ಪರದೇವತೆ–ಪಾರ್ವತಿ ೩೭
ಪರಾಪರಾ–ಶ್ರೇಷ್ಠಕ್ಕೆಶ್ರೇಷ್ಠ ೮೨
ಪಲ್ಲವ–ಚಿಗುರು ೩೪,೫೬
ಪವಿ–ವಜ್ರ ೭೪
ಪಾಂಡು–ಬಿಳುಪು ೭೦
ಪಾಂಡುರ–ಬಿಳುಪು ೭
ಪಾರ್ಥಿವ–ಪೃಥ್ವಿಗೆ ಸಂಬಂಧಿಸಿದ ೧೮
ಪಾಸಟಿ–ಸಮಾನ ೩೪
ಪಿಡಿ–ಹೆಣ್ಣಾನೆ, ಹಿಡಿ ೩೩, ೩೪
ಪಿಂತೆ–ಹಿಂದೆ ೯೬
ಪುಷ್ಪವಿಲ್ಲ–ಕಾಮ ೯೭
ಪುಳಿಂದ–ಬೇಡ ೯೬
ಪೊರವಾರ–ನಿತಂಬ ೯೩

## ಬ

ಬಗ್ಗ–ವ್ಯಾಘ್ರ, ಹುಲಿ ೧೦
ಬಂಡು–ಮಕರಂದ ೫೬
ಬಾಂಬೊಳೆ–ಆಕಾಶಗಂಗೆ ೭೨
ಬಾಸೆ–ಹೆಣ್ಣುಮಕ್ಕಳಿಗೆ ಹೊಟ್ಟೆ
ಮೇಲಿರುವ ಕೂದಲು,
ಎದೆಗೂದಲು ೭೯
ಬಿದಿ–ವಿಧಿ, ಬ್ರಹ್ಮ ೩೧
ಬೀಜ–ಬಿತ್ತು ೭
ಬೃಹದಂಡ–ಬ್ರಹ್ಮಾಂಡ ೪೨
ಬೆಕ್ಕಸಂಬಡಿಸು–ಬೆರಗುಗೊಳಿಸು ೯
ಬೇಳ್ವೆ–ಬೇಡುವೆ ೨
ಬೊಮ್ಮ–ಬ್ರಹ್ಮ ೯೩

## ಭ

ಭಂಗ–ತೆರೆ, ನಾಶ, ಸೋಲು ೨೯
ಭಂಜನೆ–ನಾಶಮಾಡುವವಳು ೨
ಭವದೀಯ–ನಿನ್ನ ೫೫, ೬೧, ೯೧
ಭುಜಗಭೂಷಣ–ಶಿವ ೧೦
ಭೂಮಿಧರ–ಆದಿಶೇಷ ೬೯
ಭೇಷಜೆ–ವೈದ್ಯೆ, ಚಿಕಿತ್ಸೆಮಾಡು
ವವಳು ೬೩, ೭೦

## ಮ

ಮಕರ–ಕುಬೇರನಒಂದು ಭಾಂಡಾರ ೭೫
ಮಕರಕುಂಡಲ–ಕಿವಿಯ ಆಭರಣ ೭೫
ಮನೋಜ–ಕಾಮ ೪೮, ೭೧
ಮರುತ್ಸಖ–ಬೆಂಕಿ ೪೨
ಮಹಾಪದ್ಮ–ಕುಬೇರನ ಒಂದು
ನಿಧಿ ೭೫
ಮಹೇಂದ್ರಜಾಲ–ಮಾಟ ಮದ್ದು
ಗಳ ವಿದ್ಯೆ ೫೬
ಮಾತಂಗ–ಆನೆ, ಒಂದು ಪರ್ವತ ೨೬
ಮಾರ–ಮನ್ಮಥ ೬೭
ಮಾರವಿ–ಒಂದು ರಾಗ ೨೩
ಮಿತ್ರಜಾ–ಯಮುನಾ ನದಿ ೬೯
ಮುಕುಂದ–ವಿಷ್ಣು, ಕುಬೇರನ
ಒಂದು ಭಾಂಡಾರ ೭೫
ಮುಮ್ಮಳಿ–ಗುರುತು ಹತ್ತದಂಥ
ಸಾವು ೧೧
ಮೃಗಯಾ–ಬೇಟೆ ೯೭
ಮೇಖಲಾ–ಒಡ್ಯಾಣ, ಡಾಬು ೬೪

ಮೋಹನ–ಒಂದುರಾಗ ೨೬
ಮೌಕ್ತಿಕ–ಮುತ್ತು ೭೧, ೮೯

### ಯ

ಯಷ್ಟಿ–ಪೋಣಿಸಿದ ದಾರ ೮೯
ಯಾಚನ–ಬಿಕ್ಕೆ ಬೇಡುವಿಕೆ ೧೧
ಯಾಜಕ–ಯಜ್ಞಮಾಡುವವ ೩೮
ಯುಗ್ಮ–ಜೋಡಿ ೭೭
ಯುಷ್ಮದೀಯ–ನಿನ್ನ ೮, ೨೭

### ರ

ರಜನೀಮುಖ–ಸಂಧ್ಯಾ,
ಸೂರ್ಯಾಸ್ತ ೭೨
ರದ–ಹಲ್ಲು ೭೫
ರುಗ್ಜಾಲ–ಕಾಂತಿಸಮುದಾಯ ೧೯
ರುಚಿರ–ಸುಂದರ, ರುಚಿಯಾದ ೨೫
ರೋಚಿ–ಕಾಂತಿ, ಕಿರಣ ೫

### ಲ

ಲತಾಂತ–ಹೂ ೭೦
ಲಲಾಮ–ತಿಲಕ, ಶ್ರೇಷ್ಠ ೮೬

### ವ

ವನವಸಜಾಕ್ಷಿ–ಗಂಗೆ ೪೫
ವಲ್ಲರಿ–ಬಳ್ಳಿ, ಗೊಂಚಲು ೭೦
ವಸು–ಅಷ್ಟವಸುಗಳು ೬
ವಾಕ್ತರುಣಿ–ಸರಸ್ವತಿ ೨೭
ವಾಮನ–ವಿಷ್ಣುವಿನ ಒಂದು
ಅವತಾರ, ದಕ್ಷಿಣ
ದಿಕ್ಕಿನ ಆನೆ ೩೨
ವಾರಣ–ಆನೆ, ತಡೆ ೪೭
ವಾಸವ–ಇಂದ್ರ ೬
ವಿದ್ರುಮ–ಹವಳ ೧೪
ವಿಧೂತ–ಹೋಗಲಾಡಿಸಿದ ೧೭
ವಿಧೃತ–ಹಿಡಿಯಲ್ಪಟ್ಟ,
ಉದ್ಧಾರಮಾಡಿದ ೧೫
ವಿನಾಯಕಿ–ನಾಯಕರಿಲ್ಲದವಳು ೧೫
ವಿಮೋಚನೆ–ಬಿಡುಗಡೆ ೫
ವಿರಿಂಚಿ–ಬ್ರಹ್ಮ ೬
ವಿಶೃತ–ಹೆಸರಾದ ೧
ವಿಸ್ಫಾರ–ಚಲಿಸುವ, ಸ್ಫುರಿಸುವ ೬೭
ವೇತಂಡ–ಐರಾವತ, ಆನೆ ೭
ವೈತರಣ–ದಾನ, ವಿತರಣ ೭
ವೈಸಾರಿಣ–ಮೀನು ೧೪

### ಶ

ಶತದಳನೇತ್ರೆ–ಕಮಲನಯನೆ,
ಪಾರ್ವತಿ ೫೦
ಶತದಳಾಂಬಕಿ–ಕಮಲನಯನೆ,
ಪಾರ್ವತಿ ೧೫
ಶತಪತ್ರ–ಕಮಲ ೫
ಶತಾಂಗ–ಅನೇಕದೇಹಗಳು, ರಥ ೪೮
ಶಂಬರ–ಚಿಗರೆ ೧೫
ಶರಾ–ಬಾಣ ೭೧
ಶರಜಾ–ಷಣ್ಮುಖ ೮೨
ಶರದೇ–ಬಾಣಕೊಟ್ಟವಳೇ ? ೮೧
ಶರಾಸನ–ಬಿಲ್ಲು ೯೮
ಶಿಲೀಮುಖ–ಬಾಣ, ತುಂಬಿ ೪, ೪೯
ಶುಕ್ತಿ–ಮುತ್ತಿನಚಿಪ್ಪು ೮೮
ಶೇಷಕಲಾಪ–ಶಿವ ೬೩
ಶ್ರೀನಿಧಿನಾಥ–ಕುಬೇರ ೩೬
ಶ್ರುತಿ–ಕಿವಿ ೪೩

### ಸ

ಸಂಗತಿ–ನಡೆ, ಗತಿ ೨೬
ಸದ್ಮ–ಮನೆ ೭೫

ಸನ್ನಿಭ—ಸಮಾನ ೭೧
ಸಂತಾನ—ಕಲ್ಪವೃಕ್ಷ ೮
ಸಂದೀಪನೆ—ಪ್ರಕಾಶವುಳ್ಳವಳಿ ೧
ಸಪರ್ಯ—ಸೇವೆ ೪೪
ಸಮುದ್ಗಕ—ಮುಚ್ಚಿದ ಪೆಟ್ಟಿಗೆ ಅಥವಾ ಬುಟ್ಟಿ ೮೮
ಸರೋರುಹಾಕರ—ಸರೋವರ ೪೯
ಸಾಂಕರ—ಬೆರಕೆ, ಕೂಡಿಕೆ ೬೫
ಸಾರ್ವಭೌಮ—ಚಕ್ರವರ್ತಿ, ಉತ್ತರದಿಕ್ಕಿನ ಆನೆ ೩೩
ಸಿತ—ಬಿಳಿ ೯೨, ೯೫
ಸಿಬ್ಬತಿ—ಸಿಟಿಬ್ಬಿ ೪೩
ಸುಮನಸ್—ಹೂ, ದೇವತೆ ೬೫
ಸೋಮಸಾರ—ಅಮೃತಸಾರ ೯೫
ಸ್ನೇಹ—ಎಣ್ಣೆ, ಪ್ರೀತಿ ೯೯
ಸ್ವರ್ಧಮು—? ೯೨
ಸ್ವನ—ಧ್ವನಿ ೩೮

## ಹ

ಹಿಮಶೈಲಜೆ—ಪಾರ್ವತಿ ೯೯
ಹೃತ್ಕುಶೇಶಯ—ಹೃದಯಕಮಲ ೧೫

# ಪಂಪಾಶತಕ

( ಇಲ್ಲಿಯ ಸಂಖ್ಯೆಗಳು ಪದ್ಯಗಳನ್ನು ಸೂಚಿಸುತ್ತವೆ )


**ಅ**

ಅಕಟಾ—ಅಯ್ಯೋ ೨೪
ಅಗ್ರೇಸರ—ಶ್ರೇಷ್ಠ ೨೫
ಅಂಗುಲಿ—ಬೆರಳು ೭೨
ಅಂಘ್ರಿ ಪಾದ ೯೯
ಅಚಲ—ಪರ್ವತ ೧೧
ಅದ್ರಿ—ಪರ್ವತ ೬೮
ಅನಘ—ಪರಿಶುದ್ಧ, ಪಾಪ ವಿಲ್ಲದ ೧೨, ೧೫, ೨೫, ೨೬
ಅನಲ—ಬೆಂಕಿ ೭, ೩೨
ಅನಿಶಂ—ಯಾವಾಗಲೂ ೩೫, ೪೬
ಅನುಜ್ಞೆ—ಅಪ್ಪಣೆ ೬೧, ೬೪
ಅನ್ನೆಗಂ—ಆವರೆಗೆ ೭೯
ಅಪನ—ಹೋಗಲಾಡಿಸುವ ೧೪
ಅಪಹಾ—ಹೋಗಲಾಡಿಸುವ ೯೯
ಅಪಾಂಗ—ಕಡೆಗಣ್ಣು ೩೫
ಅಬ್ಜ—ಚಂದ್ರ ೨೦
ಅಬ್ಜಾಪ್ತ—(ಸೂರ್ಯ), ಚಂದ್ರ ೭
ಅಬ್ಧಿ—ಸಮುದ್ರ ೮
ಅಭಿಯೋಗ—ದಾಳಿ ೬೧
ಅಮರ—ದೇವತೆ ೮
ಅಂಬರ—ಬಟ್ಟೆ ೩೭
ಅಂಬುಜ—ಕಮಲ ೧೧
ಅರಾತಿ—ವೈರಿ ೯೦
ಅವನ—ರಕ್ಷಣೆ ೬, ೨೦
ಅವನೀವಲ್ಲಭ—ದೊರೆ ೭೮
ಅಶ್ವ—ಕುದುರೆ ೨
ಅಹಿ—ಹಾವು ೮೪

**ಆ**

ಆಣ್ಮ—ಒಡೆಯ ೫೮
ಆಧಿ—ಚಿಂತೆ, ಮನೋರೋಗ ೫೮
ಆನತ—ನಮಸ್ಕರಿಸಿದ ೩೮, ೫೨
ಆಮ್ನಾಯ—ವೇದ ೨
ಆರ್ತ—ಸಮರ್ಥವಾದ, ದುಃಖವುಳ್ಳ ೪,೧೫

**ಇ**

ಇಂದುಕಲಾವತಂಸ—ಶಿವ ೪
ಇಂಬಾಗು—ಆಶ್ರಯವಾಗು ೬೫
ಇಳೆದೇರು—ಭೂಮಿಯೆಂಬರಥ ೫೪

**ಉ**

ಉಡು—ನಕ್ಷತ್ರ ೪೪
ಉಡ್ವಿಟ್—ಚಂದ್ರ ೯೩

ಉಪಭೋಗ–ಸುಖವನ್ನು ಅನುಭವಿಸುವಿಕೆ ೯೫
ಉಬ್ಬಣ–ಆಧಿಕ್ಯ, ಹೆಚ್ಚಳ ೬೫
ಉರ್ವಿ–ಭೂಮಿ ೨

**ಎ**

ಎಣ್ದೆಸೆ–ಎಂಟುದಿಕ್ಕು ೬೯
ಎರ್ಬಿಸು–ಎಬ್ಬಿಸು ೪೫

**ಒ**

ಒಚ್ಚಾರೆ–ಒಂದುಬೊಗಸೆ ೬೮
ಒಡರ್ಚು–ಮಾಡು ೯,೭೨,೧೦೦
ಒಡ್ಡು–ಸೈನ್ಯ ೭೯
ಒಡಂಬಡು–ಒಪ್ಪು ೬೩
ಒಳರು–ಇರುವರು ೫

**ಓ**

ಓಪ–ಪ್ರಿಯ, ಗಂಡ ೫೧
ಓಲೈಸು–ಸೇವಿಸು ೬೦

**ಕ**

ಕಂಜಾಸನ–ಬ್ರಹ್ಮ ೩೯
ಕಂಠೀರವ–ಸಿಂಹ ೧೧
ಕನತ್–ಹೊಳೆಯುವ ೧೦೧
ಕಂದರ್ಪ–ಮನ್ಮಥ ೧೯, ೨೧, ೩೭,೫೦
ಕಂಧರ–ಕುತ್ತಿಗೆ ೭೨
ಕಪಾಲ–ತಲೆಬುರಡೆ, ತಲೆಯೋಡು ೭೪
ಕಮಲಾಭರ್ತ–ವಿಷ್ಣು ೮
ಕರಿ–ಆನೆ ೩೭
ಕರಿದೈತ್ಯ–ಗಜಾಸುರ ೧೯
ಕಾಕೋದರ–ಹಾವು ೧೧
ಕಾತ್ಯಾಯನೀ–ಪಾರ್ವತಿ, ದುರ್ಗಿ ೨೨, ೫೩
ಕಾದೇನ–ಆದಿಶೇಷ ೨
ಕಾಲಕಾಲ–ಶಿವ ೩೭
ಕಾಲಮೇಘ–ಪ್ರಳಯಕಾಲದ ಮೋಡ ೧೯
ಕುಂಜರ–ಆನೆ ೬೭
ಕುರ್ಕುರ–ನಾಯಿ ೨೩
ಕೃಷ್ಣಸಾರ–ಚಿಗರೆ ೯೨
ಕೇಸರ–ಸಿಂಹದ ಕುತ್ತಿಗೆಯ ಮೇಲಿನ ಕೂದಲು ೧೬
ಕೈರವ–ನೈದಿಲೆ ೧೩
ಕೈರವಾಪ್ತ–ಚಂದ್ರ ೧೧
ಕೈರಾತ–ಬೇಡ ೧೬
ಕೈವಲ್ಯ–ಮೋಕ್ಷ ೧೮
ಕೈವಾರಿಸು–ಹೊಗಳು, ಕೀರ್ತಿಸು ೪,೧೦
ಕೋದಂಡ–ಬಿಲ್ಲು ೨,೭
ಕೋಲು–ಬಾಣ ೧೪

**ಗ**

ಗಡಣ–ಸಮೂಹ ೪೪
ಗುಣ್ಪು–ಗುಂಪು ಹೆಚ್ಚಳ ೧೬
ಗೋಪಧ್ವಜ–ಶಿವ ೩೫

**ಘ**

ಘನಸಾರ–ಆಲಿಕಲ್ಲು ೩೯
ಘೋರ–ಭಯಂಕರ ೮

**ಚ**

ಚರ್ಚಕ–ಚರ್ಚೆಮಾಡುವವ ೨೪
ಚಾಮೀರಕರಗರ್ಭ–ಬ್ರಹ್ಮ ೧೫
ಚಿಕೀರ್ಷಾ–ಮಾಡಬೇಕೆಂಬ ಇಚ್ಛೆ ೩

ಚಿದ್ರಾಜ್ಯ—ಜ್ಞಾನರಾಜ್ಯ ೧೦
ಚುರ್ಚು—ಸುಡು ೫೪
ಚೂಡಾಮಣಿ—ತಲೆಯ ಆಭರಣ ೭
ಚೆಂಗಾವಿ—ಕೆಂಪುಕಾವಿ ೧೬
ಚೆಮ್ಮಾವುಗೆ—ಚರ್ಮದ ಹಾವುಗೆ ೯೭
ಚೇಲ—ಬಟ್ಟೆ ೪೭

**ಜ**

ಜಂಝಾವಾತ—ಬಿರುಗಾಳಿ ೧೯
ಜಡಜೋದ್ಭೂತ—ಬ್ರಹ್ಮ ೭೪
ಜತ್ತು—ಜೊತೆಗಾರಿಕೆ ೭೦
ಜಂಭಭೇದಿ—ಇಂದ್ರ ೯೩
ಜಲಕ್ಕನೆ—ಒಮ್ಮೆಲೆ ೮೫
ಜಾಗು—ಮೌನ ೫೨, ೯೫
ಜಾಗರ್ತಿ—ಎಚ್ಚರ ೯೮
ಜೈವಾತೃಕ—ಚಂದ್ರ ೧೦೧

**ಝ**

ಝಷಕೇತ—ಕಾಮ ೫೫

**ತ**

ತಬಕ—ಗುಂಪು, ಸಮೂಹ ೯೪
ತಾರಾಧಿಪ—ಚಂದ್ರ ೮೨
ತಾರ್ಣ—ಹುಲ್ಲಿನಿಂದ ಮಾಡಿದ ೬೦
ತುರಂಗ—ಕುದುರೆ ೫೫
ತುಳಿಲ್—ನಮಸ್ಕಾರ ೪೮
ತೂಣ—ಬತ್ತಳಿಕೆ ೭೫
ತೂಷ್ಣೀಂಭಾವ—ಮೌನ ೨೩
ತೇಜಿ—ಕುದುರೆ ೫೪
ತೊಗೆ—ಸಾರು ೬೬
ತ್ರ್ಯಂಬಕ—ಶಿವ ೨

**ದ**

ದಂಭಕ—ಒಣ ಆಡಂಬರ ಉಳ್ಳವ, ಮೋಸಗಾರ ೨೪
ದರ್ಪಕ—ಕಾಮ ೮೭
ದರ್ವೀಕರ—ಹಾವು ೩೯
ದಾತಾರ—ದಾನಿ, ಕೊಡುವವ ೩೨
ದಾಮೋದರ—ವಿಷ್ಣು ೭೭
ದಾವಾನಲ—ಕಾಡಿನ ಕಿಚ್ಚು ೧೧
ದಿಡುಗು—ಅಬ್ಬರ, ಆಧಿಕ್ಯ ೪೪
ದುರಿತ—ಪಾಪ ೫೨
ದುರ್ದಂಡಭೃತ್—ಯಮ ೧೯
ದ್ಯೂ—ಆಕಾಶ ೧

**ನ**

ನಗರಾಟ್—ಶ್ರೇಷ್ಠಪರ್ವತ ೭
ನರ—ಅರ್ಜುನ ೨೧
ನಿಕರ—ಗುಂಪು, ಸಮೂಹ ೨
ನಿಗಮ—ವೇದ ೪೦, ೧೬
ನಿಚ್ಚ—ನಿತ್ಯ ೪೮
ನಿರುಪಾಧಿ—ಚಿಂತೆಯಿಲ್ಲದಿರುವಿಕೆ ೧
ನಿರ್ಜರಗಂಗಾ—ದೇವಗಂಗೆ ೩೯
ನಿಸಿತ—ಚೂಪಾದ ೨
ನಿಸ್ತುಲ—ಹೋಲಿಕೆಯಿಲ್ಲದ ೫
ನಿಸ್ಪೃಹ—ಸ್ವಾರ್ಥವಿಲ್ಲದ ೨೧
ನೀರಜಭೂತ—ಬ್ರಹ್ಮ ೯೦
ನೀರೇಜ—ಕಮಲ ೫೩
ನೀರೇಜಸಂಭವ—ಬ್ರಹ್ಮ ೭
ನೀಲಕಂಧರ—ಶಿವ ೩೫
ನೀಲಗ್ರೀವ—ಶಿವ ೧೫
ನೆಗಳ್—ಮಾಡು ೯೫
ನೇಣು—ಹಗ್ಗ, ಬಿಲ್ಲಿನ ಹೆದೆ ೨
ನೇಶಾಪ್ತ—ಶಿವ ೧೦೦
ನೈರ್ಘೃಣ್ಯ—ಕ್ರೂರತನ ೫೦

**ಪ**

ಪಂಗು—ಕುಂಟ ೬೭
ಪಟು—ಸಮರ್ಥ ೧೧

ಪದ್ದರ್ಶನ—ಪಾದದ ದರ್ಶನ ೨೩
ಪಳಂಚು—ತಾಗು, ಬಡಿ ೪೪
ಪಾಕಾರಿ—ಇಂದ್ರ ೩೮
ಪಾಣಿ—ಕೈ ೮೨
ಪಾರಿಶೇಷ—ಉಳಿಕೆ ೨೦
ಪೀಯೂಷ—ಅಮೃತ ೮
ಪುರುಹೂತ—ಇಂದ್ರ ೫೮, ೮೨
ಪುಳಿಂದ—ಬೇಡ ೫೬
ಪೊಂಬಸುರ—ಬ್ರಹ್ಮ ೬
ಪ್ರಕಾಮ್ಯ—ಅಧಿಕವಾಗಿ, ತೃಪ್ತಿಯಾಗುವಂತೆ ೮೪
ಪ್ರದಾನ—ಕೊಡುವಿಕೆ ೧೨
ಪ್ರಮಾ—ಶುದ್ಧಜ್ಞಾನ ೨೧,೪೬
ಪ್ರಸೂನ—ಹೂ ೯೧
ಪ್ರಾಲೇಯಾಚಲ—ಹಿಮಾಲಯ ೯೯

## ಫ

ಫಣಿ—ಹಾವು ೨೮
ಫಳ—ಫಲ, ಲಾಭ ೮೭
ಫಾಲ—ಹಣೆ ೯೯

## ಬ

ಬಡಿವಾರ—ಒಣ ಹೆಮ್ಮೆ, ಸೋಗುಲಾಡಿತನ ೬೮
ಬಹುಧಾ—ಬಹಳವಾಗಿ ೧೦
ಬಾಲೇಂದು—ಚಿಕ್ಕಚಂದ್ರ ೩೭, ೯೯
ಬಿದಿರ್ಚು—ಪಸರಿಸು, ಎರಚು ೪೪
ಬೃಂದಾರಕ—ದೇವತೆ ೬೦
ಬೆಡಗು—ಅಂದಚೆಂದ, ಡೌಲು ೭೪
ಬೋವ—ಬಂಡಿಯಾಳು, ಸಾರಥಿ ೫೪

## ಭ

ಭವತ್—ನಿನ್ನ ೬
ಭವದೀಯ—ನಿನ್ನ ೧೦, ೩೪
ಭಾಸ್ವತ್—ಹೊಳೆಯುವ ೧೫
ಭುಕ್ತಿ—ಆಹಾರ ೨೪
ಭೂಭೃಚ್ಚಾಪ—ಶಿವ ೧೫
ಭೈಕ್ಷ—ಭಿಕ್ಷೆಯ ೪೦

## ಮ

ಮಂಜು—ಚೆಲುವಾದ ೧೦೦
ಮದೀಯ—ನನ್ನ ೫೫
ಮಧುಲಿಟ್—ಭ್ರಮರ ೯೧, ೧೦೦
ಮಂದ—ಜಡ ೨೦
ಮಂದಾರ—ಪಾರಿಜಾತ ೭೬
ಮಂದೇಹ—ಕತ್ತಲೆ ೧೯
ಮಾತಂಗ—ಆನೆ, ಒಂದು ಪರ್ವತ ೧೧, ೨೧
ಮಾರ್ತಂಡ—ಸೂರ್ಯ ೯೬
ಮಿರ್ರಾದ—ಹೊಳೆಯುವ ೧೬
ಮುನ್ನೀರು—ಸಮುದ್ರ ೭೨
ಮುರಾಂತಕ—ಕೃಷ್ಣ ೨

## ಯ

ಯಕ್ಷೇಶ್ವರ—ಕುಬೇರ ೨೯
ಯಜಿಸು—ಯಜ್ಞಮಾಡು ೨೯

## ರ

ರಕ್ಷಾಮಣಿ—ತಾಯತ, ರಕ್ಷಾಬಂಧ ೪
ರಡ್ಡಿ—ಒಂದುಜಾತಿಯ ಹೆಸರು ೭೯
ರೋಲಂಬ—ಭ್ರಮರ ೯೯

## ಲ

ಲಘುತ್ವ—ಸಣ್ಣತನ ೭೧
ಲತ್ತಾ—ಪೆಟ್ಟು ೨೦
ಲುಬ್ಧ—ಲೋಭಿ ೬೭
ಲೋಗರು—ಜನರು, ಜನಸಾಮಾನ್ಯರು ೭೧

ವ

ವಂದಾರು—ಹೊಗಳುವವ, ಭಕ್ತ ೭೬
ವರೂಥ—ರಥ ೩೬, ೬೨
ವಸುಂಧರೆ—ಭೂಮಿ ೭೧
ವಹ್ನಿ—ಬೆಂಕಿ ೧
ವಾರಾನಿಧೀ—ಸಮುದ್ರ ೨೦
ವಾವೆ—ಸಂಬಂಧ, ಹೊಂದಿಕೆ ೯೨
ವಿತಾನ—ಗುಂಪು ೯೧
ವಿತ್ತಾಧೀಶ—ಕುಬೇರ ೭೦
ವಿಧ್ರಾವಣ—ಓಡಿಸುವಿಕೆ ೭೭
ವಿಧೂ—ಚಂದ್ರ ೫೩
ವಿಪಕ್ಷ—ವೈರಿಪಕ್ಷ ೫೫
ವಿರಿಂಚಿ—ಬ್ರಹ್ಮ ೮, ೩೪
ವೃಷಾರುಡ್—ವೃಷಭವಾಹನ ೯೩
ವೈನತೇಯು—ಗರುಡ ೧೧

ಶ

ಶಠ—ಉದ್ಧಟ, ಮೋಸಗಾರ ೨೭
ಶತಾಂಗ—ರಥ ೬೨
ಶಬಲತ್ವ—ಚಿತ್ರವಿಚಿತ್ರಬಣ್ಣದ ೯೪
ಶಾಠ್ಯ—ದುಷ್ಟತನ, ಮೋಸ ೨೪
ಶಿಖಿ—ಬೆಂಕಿ ೭೫
ಶೀತಾಚಲ—ಹಿಮಾಲಯ ೨೫
ಶೃಂಗಾಟಕ—ಒಂದುಬಗೆಯ ಸೇನಾರಚನೆ ೮೫
ಶೇಷ—ಆದಿಶೇಷ ೬೦
ಶ್ರೌತ—ವೇದಕ್ಕೆಸಂಬಧಿಸಿದ ೫೪

ಷ

ಷಡಾನನ—ಷಣ್ಮುಖ ೫೩
ಷಡ್ವರ್ಗ—ಕಾಮ ಮೊದಲಾದ ಆರು ವೈರಿಗಳು ೯೩
ಷಡ್ವರ್ಣ—ಬಿಳಿದು ಮೊದಲಾದ ಆರು ಬಣ್ಣಗಳು ೯೩

ಸ

ಸಂಕೀರ್ತನ—ಪ್ರಾರ್ಥನೆ ೩೦
ಸದ್ಮ—ಮನೆ ೨೧
ಸನ್ನಿಭ—ಸಮಾನ ೯೫
ಸಂದೋಹ—ಸಮೂಹ, ಗುಂಪು ೪೪
ಸಪರ್ಯ—ಸೇವೆ ೧೫, ೮೧, ೯೬
ಸವ್ಯ—ಎಡ ೭೪
ಸಾಮಜ—ಆನೆ ೭೫
ಸಿಂಧುತೂಣ—ಶಿವ ೯, ೨೨
ಸುರಧೇನು—ಕಾಮಧೇನು ೮೯
ಸುಷುಮಾ—ಅತಿಮನೋಹರ ೫೫
ಸೂಡು—ಮುಡಿದುಕೊಳ್ಳು ೪೪
ಸ್ತೋಕ—ತುಸು ೨೯
ಸ್ವಭೂರ್ಜ—ಕಲ್ಪವೃಕ್ಷ ೮೯

ಹ

ಹೇತು—ಕಾರಣ ೬
ಹೇಮ—ಬಂಗಾರ ೯

# ಸತ್ಯಸ್ನೇಹ ಪ್ರಕಾಶನಕ್ಕೆ ನೆರವಿತ್ತ ಮಹನೀಯರು

## ಮಹಾ ಪೋಷಕರು

ಪೂಜ್ಯ ದೊಡ್ಡಪ್ಪ ಅಪ್ಪ ಕಲಬುರ್ಗಿ ಅವರು
ಶ್ರೀ ವೈ. ಶ್ರೀನಿವಾಸ ಶೆಟ್ಟಿ, ರಾಯಚೂರು
ಶ್ರೀ ಮಲ್ಲಿಕಾರ್ಜುನಪ್ಪ, ಅಸಿಸ್ಟೆಂಟ್ ಇಂಜಿನಿಯರ್, ಗುಲಬರ್ಗಾ
ಶ್ರೀ ಬಿ. ಆರ್. ಅರಿಷಿಣಗೋಡಿ, ಒಡೆಯರು ಶ್ರೀ ಹುಚ್ಚೇಶ್ವರ ನಾಟ್ಯ ಸಂಘ, ಕಮತಗಿ
ಶ್ರೀ ವೀರಭದ್ರಪ್ಪ ಶೆಟ್ಟಿ, ಜಾಲಹಳ್ಳಿ
ಶ್ರೀ ಬಸವನಗೌಡ ಕರಡಿಗುಡ್ಡ, ಮಾನ್ವಿ
ಡಾ. ಕೆ. ಮುದ್ದಣ್ಣ, ಡಿಸ್ಟ್ರಿಕ್ಟ್ ಸಿವಿಲ್ ಸರ್ಜನ್, ಬೆಂಗಳೂರು
ಶ್ರೀ ಎಸ್. ಬಿ. ಜಂಗಮಶೆಟ್ಟಿ, ಅಸಿಸ್ಟೆಂಟ್ ಇಂಜಿನಿಯರ್, ಗುಲಬರ್ಗಾ
ಶ್ರೀ ಬಿ. ಬುದ್ಧಯ್ಯ ಸ್ವಾಮಿ ಸುವ್ವಿಮಠ, ರಾಯಚೂರು
ಶ್ರೀ ದೇವೇಂದ್ರಪ್ಪ, ಅಸಿಸ್ಟೆಂಟ್ ಇಂಜಿನಿಯರ್, ರಾಯಚೂರು
ಶ್ರೀ ಸೋಮಾ ರಾಮನಗೌಡರು, ರಾಯಚೂರು
ಶ್ರೀ ಶಿವರಾಜ ಪಾಟೀಲ ಅಡ್ವೋಕೇಟ್, ಗುಲಬರ್ಗಾ
ಡಾ. ಎಸ್. ಬಿ. ಅಮರಖೇಡ, ರಾಯಚೂರು
ಡಾ. ಎ. ಶಂಕರ, ರಾಯಚೂರು

## ಪೋಷಕರು

ಶ್ರೀ ಚೆನ್ನಬಸವಪ್ಪ ವಕೀಲ, ಬೆಟ್ಟದೂರು
ಶ್ರೀ ಹುಲಿಗೆಪ್ಪ, ಕಿರಾಣಿ ವ್ಯಾಪಾರಿ, ರಾಯಚೂರು
ಶ್ರೀ ಎಚ್. ರುದ್ರಗೌಡ, ಅಸಿಸ್ಟೆಂಟ್ ಇಂಜಿನಿಯರ್, ಸಿಂಧನೂರು
ಶ್ರೀ ಬಸವಂತರಾವ್ ಪಾಟೀಲ, ಡಿ. ಎಸ್. ಪಿ. ಕೊಪ್ಪಳ
ಶ್ರೀ ಲಕ್ಕಪ್ಪ ಅ. ಶಿರಹಟ್ಟಿ, ವಿಜಾಪುರ

## ಆಶ್ರಯದಾತರು

ಶ್ರೀ ಮ.ನಿ.ಪ್ರ. ಸಿದ್ಧರಾಮ ಸ್ವಾಮಿಗಳು ಚೌಕಿಮಠ, ಚಿಕ್ಕಸೂಗೂರು
ಶ್ರೀ ಮ.ನಿ.ಪ್ರ. ಚೆನ್ನಬಸವ ಸ್ವಾಮಿಗಳು, ಒಳಬಳ್ಳಾರಿ

ಶ್ರೀ ಮ.ನಿ.ಪ್ರ. ರುದ್ರಮುನಿ ಸ್ವಾಮಿಗಳು ಶ್ರೀ ಚರಣಗಿರಿಮಠ, ಪಾಳ್ವಿ
ಶ್ರೀ ಬಸವರಾಜ ಪಾಟೀಲ, ಅಸಿಸ್ಟೆಂಟ್ ಕಮಿಷನರ್, ಹಾಸನ
ಶ್ರೀ ಭೀಮನಗೌಡ, ಪಿ.ಡಬ್ಲ್ಯೂ. ಡಿ. ಕಂಟ್ರ್ಯಾಕ್ಟರ್, ಗುಲಬರ್ಗಾ
ಶ್ರೀಮತಿ ಗೌರಮ್ಮ ನಾಗಪ್ಪ ನೆರವಿ, ರಾಯಚೂರು
ಶ್ರೀ ಶಂಕರ ಮೂಗಿ ಅಡ್ವೊಕೇಟ್ ಸುಪ್ರೀಮ್‌ಕೋರ್ಟ್, ಗುಲಬರ್ಗಾ
ಶ್ರೀ ಉಮಾಪತಿ ಶಿರವಾರ, ಕಂಟ್ರ್ಯಾಕ್ಟರ್, ರಾಯಚೂರು
ಶ್ರೀ ಶಂಕರಗೌಡ ಬೆಟ್ಟದೂರು (ಶಾಂತಿನಿಕೇತನ ಕಲಾವಿದ), ಬೆಟ್ಟದೂರು
ಶ್ರೀ ಬಿ. ಎನ್. ಅಂಗಡಿ, ಕಂಟ್ರ್ಯಾಕ್ಟರ್, ರಾಯಚೂರು
ಶ್ರೀ ಗೋರಕಲ್ ಈಶ್ವರಪ್ಪ ಸಾಹುಕಾರ, ಕುರುಡಿ
ಶ್ರೀ ಎಮ್. ರಾಮಕೃಷ್ಣ, ವ್ಯಾಪಾರಿಗಳು, ರಾಯಚೂರು
ರಾಯಚೂರು ಜಿಲ್ಲಾ ಸಹಕಾರಿ ಮಧ್ಯವರ್ತಿ ಬ್ಯಾಂಕ್ ಸಿಬ್ಬಂದಿಗಳ ಸಹಕಾರ ಪತ್ತಿನ ಸಂಘ ನಿಯಮಿತ, ರಾಯಚೂರು
ಶ್ರೀ ವೆಂಕಟೇಶ್ವರರಾವ, ಅಸಿಸ್ಟೆಂಟ್ ಇಂಜಿನಿಯರ್, ಗುಲಬರ್ಗಾ
ಶ್ರೀ ಬಸವಲಿಂಗಪ್ಪ ಕಂಗಳ್ ಸಾಹುಕಾರ, ಅಮ್ಮಾಪುರ
ಶ್ರೀ ರಾಜಾ ಲಕ್ಷ್ಮಪ್ಪನಾಯಕ, ಕಂಟ್ರ್ಯಾಕ್ಟರ್, ಸುರಪುರ
ಶ್ರೀ ಶಾಂತರಡ್ಡಿ, ಕಂಟ್ರ್ಯಾಕ್ಟರ್, ಸುರಪುರ
ಶ್ರೀ ಜಿ. ಸೋಮಣ್ಣ, ಕಂಟ್ರ್ಯಾಕ್ಟರ್, ಸುರಪುರ
ಶ್ರೀ ಬಿ. ಸಂಗಪ್ಪ, ಅಸಿಸ್ಟೆಂಟ್ ಇಂಜಿನಿಯರ್, ಸೇಡಂ
ಶ್ರೀ ಟಿ. ಶರಣಪ್ಪ ಅಸಿಸ್ಟೆಂಟ್ ಕಮಿಷನರ್, ಬೆಂಗಳೂರು
ಶ್ರೀ ಮಹಾದೇವಪ್ಪ ಜೆ. ಬಿರಲ್, ನಾಲ್ವಾರ
ಶ್ರೀ ಶಿವಶರಣಪ್ಪ ಪಾಳ್ಕೆದ, ಕಂಟ್ರ್ಯಾಕ್ಟರ್, ಚಿತಾಪುರ
ಶ್ರೀ ಎಂ. ಎಸ್. ಮಹಾಂತಯ್ಯ, ಪ್ರಾಧ್ಯಾಪಕರು, ಹೈದ್ರಾಬಾದ
ಶ್ರೀ ಶಿವಲಿಂಗರಡ್ಡಿ ಪಾಟೀಲ, ಬೆಸಕನಳ್ಳಿ
ಶ್ರೀ ಬಸವರಡ್ಡಿ ಇಟಗಿ, ನಾಲ್ವಾರ

## ಸತ್ಯಸ್ನೇಹ ಪ್ರಕಾಶನದ ಪ್ರಕಟನೆಗಳು

| | | |
|---|---|---|
| ೧ | ನಂಜು-ನೊರೆವಾಲು (ನಾಟಕ) – ಶಾಂತರಸ | ೩–೫೦ |
| ೨ | ನಂದಿಕೊಲು (ನವ್ಯ ಕವನಸಂಕಲನ) – ಚಂದ್ರಕಾಂತ ಕುಸನೂರು | ೩–೦೦ |
| ೩ | ಮಾನಸಗಳ್ಳಿ (ಕವನಸಂಕಲನ) – ಶಾಂತರಸ | ೩–೦೦ |
| ೪ | ಕೇದಾರ (ಕವನಸಂಕಲನ) – ಜಿ. ಕೃಷ್ಣರಾವ | ೨–೦೦ |
| ೫ | ಚರ್ಚಗೇಟ್ (ನವ್ಯ ಕಾದಂಬರಿ) – ಚಂದ್ರಕಾಂತ ಕುಸುನೂರು | ೪–೦೦ |
| ೬ | ಹಸ್ತಾಂತರ (ನಾಟಕ) – ಎನ್ಕೆ | ೩–೫೦ |
| ೭ | ಮುಂಜಾವಿನ ಕೊರಳು (ಕವನಸಂಕಲನ) – ಜಂಬಣ್ಣ ಅಮರಚಿಂತ | ೨–೦೦ |
| ೮ | ಹಳ್ಳ್ಯಾ ಕೊಳ್ಳ್ಯಾ ನೀರು (ಅಸಂಗತ ನಾಟಕ) – ಚಂದ್ರಕಾಂತ ಕುಸನೂರು | ೧–೫೦ |
| ೯ | ಬಹುರೂಪ (ಪ್ರಬಂಧ ಸಂಕಲನ) – ಶಾಂತರಸ | ೪–೦೦ |
| ೧೦ | ಭುವನೈಕನಾಯಕೀ ಶತಕ – ಸಂಗವಿಭು | ೨–೨೫ |
| ೧೧ | ಪಂಪಾಶತಕ – ಸಂಗವಿಭು | ೨–೨೫ |
| ೧೨ | ಬಸವಪೂರ್ವ ಯುಗದ ಶರಣರು (ಸಂಶೋಧನೆ ಚರಿತ್ರೆ) – ಶಾಂತರಸ | ೩–೫೦ |
| ೧೩ | ಸಂತೆಕೆಲ್ಲೂರು ಸಂತ (ಕಾವ್ಯ-ಚರಿತ್ರೆ) – ಪರ್ವತಯ್ಯ ಶಿವಪುರ | ೦–೮೦ |
| ೧೪ | ಬೆನ್ನಹಿಂದಿನ ಬೆಳಕು (ಕವನಸಂಕಲನ ಸಂಪಾದನೆ) – ಶಾಂತರಸ | ೧೫–೦೦ |
| ೧೫ | ಕಾದ್ಹಂಚು ಮೇಲಿನ ನೀರು (ಕವನಸಂಕಲನ) – ಜಿ. ಕೃಷ್ಣರಾವ | ೩–೦೦ |
| ೧೬ | ಮೂರುಶತಕ (ಸಂಪಾದನೆ) – ಶಾಂತರಸ | ೮–೦೦ |

ಶತಕ ಸಾಹಿತ್ಯವು ಕ್ರಿ. ಶ. ೧೯ನೆಯ ಶತಮಾನದಲ್ಲಿ ಒಬ್ಬ ಚಂಪುಕಾರನ ಕೃಪಾ ದೃಷ್ಟಿಗೆ ಪಾತ್ರವಾಗಿದ್ದುದು ಕನ್ನಡ ಸಾಹಿತ್ಯ ಸಂಸ್ಕೃತಿಯ ಜೀವಂತಿಕೆಯ ಕುರುಹು.

ಸಂಗವಿಭುವಿನ ಕುಮಾರವಿಜಯವು ಕನ್ನಡ ಪ್ರತಿಭೆಯ ನೂತನಾವಿಷ್ಕಾರವೆಂದು ಪ್ರಕಟವಾದಾಗ ರಸಿಕರು ಮೆಚ್ಚುವರೆಂಬಲ್ಲಿ ಯಾವ ಸಂಶಯವೂ ಇಲ್ಲ.

—ಡಾ. ದ. ರಾ. ಬೇಂದ್ರೆ

ಎಡೆದೊರೆ ನಾಡಿನ– ನೃಪತುಂಗ ಸೀಮೆಯ ಸತ್ವದ ಪ್ರತೀಕ ಸಂಗವಿಭುಕವಿ. ೧೯ನೆಯ ಶತಮಾನದಲ್ಲಿ ಮತ್ತೊಮ್ಮೆ ಚಂಪುವನ್ನು ಬಳಸಿ ಅದಕ್ಕೆ ಹೊಸ ಜೀವವಿತ್ತ ಮಹಾಕವಿ ಸಂಗವಿಭು.

ಸುತ್ತು ಮುತ್ತು ಯುದ್ಧ, ಕೋಲಾಹಲ. ಅಂಥ ಕಾಲದಲ್ಲಿ ಧರ್ಮ ನಿಲ್ಲಿಸಿ, ಕಾವ್ಯವನ್ನು ಬದುಕಿಸಿ ಜನ ಜೀವನಕ್ಕೆ ಒಂದು ವಿನೂತನ ಶಕ್ತಿಯನ್ನು ಕೊಟ್ಟ ವೀರ-ಮಹಿಮ ಸಂಗವಿಭು.

ಅಸಾಧಾರಣ ಪ್ರತಿಭೆ, ಅತ್ಯುಜ್ವಲ ಭಾವ, ನವನವೀನ ಜೀವಂತ ಅಲಂಕಾರ ಗಳ ಬಳಕೆ,– ಈ ಕವಿಯದು ಅದೊಂದು ಹೊಸ ಕಾವ್ಯಲೋಕ.

"ಮೂರುಶತಕ" ಅತ್ಯಂತ ಸುಂದರ ಕೃತಿ. ಶತಕವನ್ನು ರಸವತ್ತಾದ ಕಾವ್ಯ ಮಟ್ಟಕ್ಕೇರಿಸಿದ ಹರಿಹರ, ರತ್ನಾಕರವರ್ಣಿ ಇವರ ಶ್ರೇಷ್ಠ ಸಾಲಿನಲ್ಲಿ ಒಬ್ಬ ನಾಗಿದ್ದಾನೆ ಸಂಗವಿಭು.

ಎಡೆದೊರೆ ನಾಡಿನಲ್ಲಿ ಮಹಾಕವಿಗಳು ಹುಟ್ಟಿದಂತೆ ಮಹಾ ದಾನಿಗಳೂ ಹುಟ್ಟಿ ಬಾಳಿ ಬೆಳಗಿದ್ದಾರೆ. ಈ ಶತಕವನ್ನು ಬೆಳಕಿಗೆ ತರಲು ನೆರವಿತ್ತ ದಾನಿಗಳು ಸಂಗವಿಭುವಿನಂತೆ ಈ ನಾಡಿನ ಸತ್ವದ ತತ್ವದ ಪ್ರತೀಕವಾಗಿದ್ದಾರೆ.

—ಅಮರಾನಂದ ಬೆಟ್ಟದೂರು